ಉಪನ್ಯಾಸ
ಂಥಮಾಲೆ

೨೩೧

# ಕರ್ನಾಟಕದಲ್ಲಿ ರಾಷ್ಟ್ರೀಯತೆಯ ಬೆಳವಣಿಗೆ

ಡಾ|| ಎನ್. ಎ. ಪಾಟೀಲ,
ಎಂ ಎ., ಪಿಎಚ್.ಡಿ.



ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ
೧೯೭೬

ರಜತ ಮಹೋತ್ಸವದ ಪ್ರಕಟನೆ

ಉಪನ್ಯಾಸ ಗ್ರಂಥಮಾಲೆ

೨೩೧

# ಕರ್ನಾಟಕದಲ್ಲಿ ರಾಷ್ಟ್ರೀಯತೆಯ ಬೆಳವಣಿಗೆ

ಡಾ|| ಎನ್. ಎ. ಪಾಟೀಲ ಎಂ. ಎ., ಪಿಎಚ್. ಡಿ.






ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ

ಜನವರಿ ೧೯೭೬

ಪ್ರಕಾಶಕರು:

ಎಸ್. ಎಸ್. ಒಡ್ಡೆಯರ ಎಂ.ಎ., ಎಲ್‌ಎಲ್.ಬಿ.

ಕುಲಸಚಿವರು

ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ಪ್ರಥಮ ಮುದ್ರಣ : ೫,೦೦೦ ಪ್ರತಿಗಳು

ಜನವರಿ, ೧೯೭೬





ಬೆಲೆ : ೨೫ ಪೈಸೆ

ಮುದ್ರಕರು :

ಶ್ರೀಮತಿ ಶಾಂತಾ ಎಚ್. ಬಳೂಟಗಿ,

ಶಿವಾನಂದ ವರ್ಕ್ಸ್, ಜವಳಿಪೇಟೆ,

ಧಾರವಾಡ

# ಮುನ್ನುಡಿ

ಕರ್ನಾಟಕ ವಿಶ್ವವಿದ್ಯಾಲಯವು ತನ್ನ ಪ್ರಸಂಗ ವಿಸ್ತರಣ ಹಾಗೂ ಪ್ರಕಟನ ಶಾಖೆಯ ಮುಖಾಂತರ ಕೈಕೊಂಡು ನಡೆಸುತ್ತಿರುವ ಜ್ಞಾನಪ್ರಸಾರ ಯೋಜನೆಗಳಲ್ಲಿ ಈ 'ಉಪನ್ಯಾಸ ಗ್ರಂಥಮಾಲೆ' ಅತ್ಯಂತ ಮುಖ್ಯವೂ, ಜನಪ್ರಿಯವೂ ಆಗಿರುವದು ಹೆಮ್ಮೆಯ ಮಾತಾಗಿದೆ. ವಿಶ್ವವಿದ್ಯಾಲಯದ ಆಡಳಿತ ಕ್ಷೇತ್ರದಲ್ಲಿರುವ ಎಂಟು ಜಿಲ್ಲೆಗಳಲ್ಲಿಯೂ ಉಪನ್ಯಾಸ ಶಿಬಿರಗಳನ್ನು ಏರ್ಪಡಿಸಲಾಗುತ್ತಿದ್ದು, ವಿಶ್ವವಿದ್ಯಾಲಯದ ಮತ್ತು ಇದಕ್ಕೆ ಸೇರಿದ ಕಾಲೇಜುಗಳ ಪ್ರಾಧ್ಯಾಪಕರು ಸಾಹಿತ್ಯ, ವಿಜ್ಞಾನ, ಸಾಮಾಜಿಕಶಾಸ್ತ್ರ ಮೊದಲಾದ ಶಾಖೆಗಳಿಗೆ ಸಂಬಂಧಪಟ್ಟ ವಿಷಯಗಳನ್ನು ಆಯ್ದುಕೊಂಡು, ಶಾಸ್ತ್ರಸಮ್ಮತವಾದ ಪರಣಿಯಲ್ಲಿ, ಜನಸಾಮಾನ್ಯರಿಗೆ ತಿಳಿಯುವ ಶೈಲಿಯಲ್ಲಿ ಈ ಶಿಬಿರಗಳಲ್ಲಿ ಉಪನ್ಯಾಸಗಳನ್ನು ಕೊಡುತ್ತಾರೆ. ವಿಶ್ವವಿದ್ಯಾಲಯದ ಜ್ಞಾನಭಾಂಡಾರದ ಅಲ್ಪಾಂಶವನ್ನಾದರೂ ಮಹಾಜನರ ಮನೆಭಾಗಿಲಿಗೆ ಒಯ್ದು ಮುಟ್ಟಿಸಬೇಕೆಂದು ಮಾಡಿದ ಈ ಪ್ರಯತ್ನಕ್ಕೆ ನಮ್ಮ ನಿರೀಕ್ಷೆಗೆ ಮೀರಿದ ಮೆಚ್ಚಿಕೆಯೂ ಪ್ರೋತ್ಸಾಹವೂ ದೊರೆಯುತ್ತಿವೆ. ಜನರು ತಾವಾಗಿಯೇ ಮುಂದೆ ಬಂದು ತಮ್ಮ ತಮ್ಮ ಊರುಗಳಲ್ಲಿ ಉಪನ್ಯಾಸಮಾಲೆಗಳನ್ನು ಏರ್ಪಡಿಸಲು ವಿಶ್ವವಿದ್ಯಾಲಯಕ್ಕೆ ಬರೆದು ಬಿನ್ನವಿಸಿಕೊಳ್ಳುತ್ತಿರುವದು ನಿಜವಾಗಿಯೂ ಸಂತೋಷದ ಸಂಗತಿಯಾಗಿದೆ.

ಈ ಜ್ಞಾನಪ್ರಸಾರ ಕಾರ್ಯದಲ್ಲಿ ಭಾಗವಹಿಸುವದರಿಂದ ವಿಶ್ವವಿದ್ಯಾಲಯದ ಹಾಗೂ ಕಾಲೇಜುಗಳ ಅಧ್ಯಾಪಕರಿಗೆ ಆಯಾ ಪ್ರದೇಶದ ಜನತೆಯೊಡನೆ ಹೆಚ್ಚಿನ ಸಂಪರ್ಕ ಒದಗುವದಲ್ಲದೆ ಎಂಥ ವಿಷಯುವನ್ನಾದರೂ ಕನ್ನಡದಲ್ಲಿ ತಿಳಿಸಿ ಹೇಳುವ ಹಾಗೂ ಅದನ್ನು ಸುಲಭ ಶೈಲಿಯಲ್ಲಿ ಬರವಣಿಗೆಯು ಳ್ಳಿಳಿಸುವ ಅವಕಾಶ ದೊರೆಯುತ್ತದೆ. ಈ ಕಾರ್ಯದಲ್ಲಿ ಅವರೆಲ್ಲರೂ ಮನಮುಟ್ಟಿ ಸಹಕರಿಸುತ್ತಿರುವದು ಶ್ಲಾಘನೀಯ.

ಈ ಮಾಲೆಯಲ್ಲಿ ಈಗಾಗಲೆ ೨೩೦ ಪುಸ್ತಕಗಳು ಪ್ರಕಟವಾಗಿವೆ. ಅವು ಅಚ್ಚಾಗಿ ಹೊರಬಂದೊಡನೆ ಅವುಗಳ ಸಾವಿರಾರು ಪ್ರತಿಗಳನ್ನು ಜನರು ಕೊಂಡು ಓದುತ್ತಾರೆ. ಅನೇಕ ಪುಸ್ತಕಗಳು ನಾಲ್ಕು-ಐದು ಮುದ್ರಣಗಳನ್ನು ಕಂಡಿರುವುದು ಈ ಮಾಲೆಯ ಉಪಯುಕ್ತತೆಯನ್ನೂ ಜನಪ್ರಿಯತೆಯನ್ನೂ ವ್ಯಕ್ತಗೊಳಿಸುತ್ತದೆ. ಇದು ನಾಡಿನ ಪ್ರಗತಿಯ ಚಿನ್ಹೆಯೆಂದು ಭಾವಿಸುತ್ತೇನೆ.

ವಿಶ್ವವಿದ್ಯಾಲಯದ ಈ ಸೇವೆಯ ಸಂಪೂರ್ಣ ಪ್ರಯೋ-ಜನ ಪಡೆದು ಸಾಮಾನ್ಯ ಜನತೆ ನಾಡಿನ ಸರ್ವತೋಮುಖವಾದ ಪ್ರಗತಿಯಲ್ಲಿ ಪಾಲುಗೊಳ್ಳಲೆಂದು ಹಾರೈಸುತ್ತೇನೆ.

ಕರ್ನಾಟಕ ವಿಶ್ವವಿದ್ಯಾಲಯ  
ಧಾರವಾಡ  
೧೦-೧-೧೯೭೬

ಆರ್. ಸಿ. ಹಿರೇಮಠ  
ಕುಲಪತಿಗಳು

# ನನ್ನ ಮಾತು

ಯುದ್ಧದ ಕಥೆಗಳು ಯಾವಾಗಲೂ ರಮ್ಯವಾಗಿರುತ್ತವೆ ಆದರೆ ಸ್ವಾತಂತ್ರ್ಯ ಸಂಗ್ರಾಮದ ಇತಿಹಾಸವು ರಮ್ಯತರವಾಗಿರುತ್ತದೆ. ಅಂತೆಯೇ ಪ್ರಪಂಚದ ನಾನಾ ದೇಶಗಳ ಸ್ವಾತಂತ್ರ್ಯ ಸಂಗ್ರಾಮದ ಇತಿಹಾಸವನ್ನು ಓದುವ ಲವಲವಿಕೆ ನನಗೆ ವಿದ್ಯಾರ್ಥಿ ದೆಶೆಯಿಂದಲೇ ಹೆಚ್ಚು. ಯಾವದೇ ದೇಶದ ಸ್ವಾತಂತ್ರ್ಯ ಸಂಪ್ರಾಪ್ತಿಯ ಚರಿತ್ರೆಯನ್ನವಲೋಕಿಸಿದರೂ ಆ ಹೋರಾಟಕ್ಕೆಲ್ಲ ರಾಷ್ಟ್ರೀಯತೆಯೇ ಬೀಜಾಂಕುರವಾಗಿರುವದು ಸ್ಪಷ್ಟವಾಗುತ್ತದೆ. ಪಾರತಂತ್ರ್ಯದಲ್ಲಿ ತೊಳಲಾಡುತ್ತಿದ್ದ ಭಾರತವು ತನ್ನ ಜನತೆಯಲ್ಲಿ ರಾಷ್ಟ್ರೀಯ ಭಾವನೆಯನ್ನು ಕುದುರಿಸಿ ಅವರಲ್ಲಿ ಐಕ್ಯತೆಯನ್ನುಂಟುಮಾಡಿ, ಅವರ ಸಂಘಟನಾಶಕ್ತಿಯನ್ನು ಕ್ರೋಢೀಕರಿಸಿ ತ್ಯಾಗ ಬಲಿದಾನಗಳಿಗೆ ಅವರನ್ನು ಅಣಿಗೊಳಿಸಿ ನಡೆಸಿದ ಹೋರಾಟವೇ ಭಾರತದ ರಾಷ್ಟ್ರೀಯತೆಯ ಬೆಳವಣಿಗೆಯ ಚರಿತ್ರೆ.

ಭಾರತವು ಬಹು ವಿಶಾಲವಾದ ವಿಸ್ತಾರವಾದ ರಾಷ್ಟ್ರ. ಆದರಲ್ಲಿಯ ಒಂದೊಂದು ಪ್ರಾಂತ ಒಂದೊಂದು ದೇಶದಷ್ಟಿವೆ. ಭಾರತದ ಸ್ವಾತಂತ್ರ್ಯ ಸಂಪಾದನೆಗಾಗಿ ಆಯಾ ಪ್ರಾಂತಗಳು ನಡೆಸಿದ ಹೋರಾಟವೇ ಭಾರತೀಯ ರಾಷ್ಟ್ರೀಯತೆಯ ಹೋರಾಟ. ಅದುವೇ ಭಾರತದ ರಾಷ್ಟ್ರೀಯತೆಯ ಬೆಳವಣಿಗೆಯ ಚರಿತ್ರೆ. ಈ ದಿಶೆಯಲ್ಲಿ ಕರ್ನಾಟಕದ ಪಾಲು ಬಹು ದೊಡ್ಡದಾಗಿದ್ದು ಅದು ವಹಿಸಿದ ಪಾತ್ರ. ಸಲ್ಲಿಸಿದ ಕಾಣಿಕೆ ಅಮೋಘವಾಗಿದೆ. ಇಂತು ಹಿರಿದುದನ್ನು ಕಿರಿದರಲ್ಲಿ ಹೇಳುವದು ಸುಲಭವಲ್ಲ.

ಕರ್ನಾಟಕ ವಿಶ್ವವಿದ್ಯಾಲಯದ ವ್ಯಾಸಂಗವಿಸ್ತರಣ ಶಾಖೆಯ ಆಮಂತ್ರಣದ ಮೇರೆಗೆ ನಮ್ಮ ಕರ್ನಾಟಕದ ರಾಯಚೂರು ಜಿಲ್ಲೆಯ ತಾಲೂಕಾ ಸ್ಥಳವಾದ ಸಿಂಧನೂರಲ್ಲಿ "ಕರ್ನಾಟಕದಲ್ಲಿ ರಾಷ್ಟ್ರೀಯತೆಯ ಬೆಳವಣಿಗೆ" ಎಂಬ ವಿಷಯದ ಮೇಲೆ ನಾನು ಉಪನ್ಯಾಸ ಮಾಡಿದ್ದೆ. ಆ ಉಪನ್ಯಾಸದ ವಸ್ತುವನ್ನೇ ಅಲ್ಲಿಷ್ಟು ಇಲ್ಲಿಷ್ಟು ಹಿಗ್ಗಿಸಿ ಅದಕ್ಕೆ ಸದ್ಯದ ಸ್ವರೂಪವನ್ನೀಯಲಾಗಿದೆ. ಆನೆಯನ್ನು ಕನ್ನಡಿಯಲ್ಲಿ ನೋಡಿದಂತೆ ಈ ಕಿರುಹೊತ್ತಿಗೆಯಲ್ಲಿ ಕನ್ನಡನಾಡಿನ ರಾಷ್ಟ್ರೀಯತೆಯ ಇತಿಹಾಸದ ಇಣಿಕು ನೋಟವಿದೆ. ಓದುಗರಿಗೆ ಅದು ಲಭ್ಯವಾದಷ್ಟರ ಮಟ್ಟಿಗೆ ನನ್ನ ಪ್ರಯತ್ನ ಸಫಲವಾಗುತ್ತದೆ.

ಈ ಸದವಕಾಶವನ್ನು ಒದಗಿಸಿಕೊಟ್ಟ ವಿಶ್ವವಿದ್ಯಾಲಯದ ವ್ಯಾಸಂಗವಿಸ್ತರಣ ಶಾಖೆಯ ನಿರ್ದೇಶಕರಾದ ಶ್ರೀ ಚೆನ್ನವೀರ ಕಣವಿ ಕುಲಸಚಿವರಾದ ಶ್ರೀ ಎಸ್. ಎಸ್. ಒಡೆಯರ್ ಹಾಗೂ ಕುಲಪತಿಗಳಾದ ಡಾ|| ಆರ್. ಸಿ. ಹಿರೇಮಠ ಇವರೆಲ್ಲರಿಗೆ ನನ್ನ ಕೃತಜ್ಞತೆಗಳು.

ನನ್ನ ಧರ್ಮಪತ್ನಿ ಸೌ|| ವಿಮಲಾ ಎನ್. ಪಾಟೀಲ ಮತ್ತು ಶ್ರೀ ಚಂದ್ರಶೇಖರಸ್ವಾಮಿ ಗದಿಗೆಯ್ಯ ಹೊಸಪುರಮಠ ಇವರು ಈ ಕಿರುಹೊತ್ತಿಗೆಯನ್ನು ಸಿದ್ಧಪಡಿಸುವಲ್ಲಿ ನೀಡಿದ ಸಹಾಯವನ್ನು ಇಲ್ಲಿ ಸ್ಮರಿಸಬಹುದಾಗಿದೆ

ರಾಜ್ಯಶಾಸ್ತ್ರ ವಿಭಾಗ — ಎನ್. ಎ. ಪಾಟೀಲ
ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ

೭-೧-೧೯೭೭

# ಪರಿವಿಡಿ

# ೧ ರಾಷ್ಟ್ರೀಯತೆ ಎಂದರೇನು ?

'ರಾಷ್ಟ್ರೀಯತೆ' ಪದವು ರಾಷ್ಟ್ರ ಶಬ್ದದಿಂದ ಬಂದುದಾಗಿದೆ. ರಾಷ್ಟ್ರವೆಂದರೆ ತಮ್ಮದೇ ಆದ ನಿರಂಕುಶ ರಾಜ್ಯಾಡಳಿತೆಯನ್ನು ಹೊಂದಿದಂತಹ ಇಲ್ಲವೇ ಪಡೆಯಬೇಕೆಂಬ ಸಂಕಲ್ಪವುಳ್ಳಂಥ ಜನರು ಮತ್ತೈಕ್ಯದಿಂದ ಕೂಡಿಕೊಂಡಿರುವ ಭೂಖಂಡವು ರಾಷ್ಟ್ರವೆಂದು ಸಾಮಾನ್ಯವಾಗಿ ಹೇಳಬಹುದು. ಅಂತಹ ಜನರಲ್ಲೆಲ್ಲ ಸಾಮಾನ್ಯವಾದ ಭಾವನೆಯೆಂದರೆ ಸ್ವದೇಶಾಭಿಮಾನ. ಒಂದು ದೇಶದಲ್ಲಿರುವವರೆಲ್ಲ ಒಂದು, ಅವರ ನುಡಿ (ಭಾಷೆ) ಒಂದು, ಅವರ ನಡೆ (ಆಚಾರ, ವಿಚಾರ, ಸಂಸ್ಕೃತಿ) ಒಂದು, ಗುರಿ ಒಂದು, ಎಂಬ ಒಂದುತನದ ಭಾವನೆಯೇ ಅವರಲ್ಲಿ ಐಕ್ಯತೆಯನ್ನುಂಟುಮಾಡುವದಲ್ಲದೇ ಮತ್ತದು ಅವರಲ್ಲಿ ಸ್ವಾಭಿಮಾನವನ್ನೂ, ಸ್ವಜನಾಭಿಮಾನವನ್ನೂ ಸ್ವಾತಂತ್ರ್ಯಾಭಿಮಾನವನ್ನೂ ಜಾಗೃತಗೊಳಿಸುತ್ತದೆ. ಇಂತಹ ಭಾವನೆಯೇ ರಾಷ್ಟ್ರೀಯತೆ.

ಯಾವದೇ ದೇಶದ ಶಾಂತಿ, ಸುಖ, ಸಮೃದ್ಧಿ ಹಾಗೂ ಅಭಿವೃದ್ಧಿಗಳು ಅದರ ರಾಜಕೀಯ ಸ್ವಾತಂತ್ರ್ಯವನ್ನು ಹೆಚ್ಚಾಗಿ ಅವಲಂಬಿಸಿರುತ್ತವೆ. ಆ ರಾಜಕೀಯ ಸ್ವಾತಂತ್ರ್ಯವನ್ನು ಸಂಪಾದಿಸುವದಕ್ಕಾಗಿ ಅದನ್ನು ಕಾಯ್ದುಕೊಂಡು ಹೋಗುವದಕ್ಕಾಗಿ ಸ್ವದೇಶಾಭಿಮಾನವು ಜಾಗೃತವಾಗಿರಬೇಕು. ಅಲ್ಲಿಯ ಜನತೆಯಲ್ಲಿಯ ಐಕಮತ್ಯ ಅವರೆಲ್ಲರಲ್ಲಿಯ ಸಾಮ್ಯತೆಗಳಿಂದ ಅವರೆಲ್ಲರಲ್ಲಿ ಏಕತೆಯ ಐಕ್ಯತೆಯ ಭಾವನೆ ಉಂಟಾಗುತ್ತದೆ. ಇಂತಹ ಭಾವನಾತ್ಮಕ ವಾತಾವರಣದಿಂದಲೇ "ರಾಷ್ಟ್ರೀಯತೆ"ಯ ಪ್ರಾದುರ್ಭಾವವಾಗುತ್ತದೆ. ಎಲ್ಲರಿಗೂ ಸರ್ವಸಾಮಾನ್ಯವಾದ, ಧ್ಯೇಯ, ನ್ಯೂನತೆ, ಕೊರತೆ, ಸಂಕಷ್ಟ, ಅಪಾಯ, ಭಯ, ಭೀತಿ–ಇವು ರಾಷ್ಟ್ರೀಯತೆಯ ಉದಯಕ್ಕೆ ಹಾಗೂ ಪೋಷಣೆಗೆ ಕಾರಣವಾಗುತ್ತವೆ.

'ರಾಷ್ಟ್ರೀಯತೆ' ಎಂದರೆ ಸ್ವದೇಶಾಭಿಮಾನವೆಂದು ಸಾಮಾನ್ಯವಾಗಿ ಹೇಳುವ ವಾಡಿಕೆ ಇದ್ದರೂ ವಿಶಾಲಾರ್ಥದಲ್ಲಿ 'ರಾಷ್ಟ್ರೀಯತೆ'ಯು ಸ್ವಜನರಿಗಾಗಿ ಸ್ವಧರ್ಮಕ್ಕಾಗಿ, ಸ್ವಭಾಷೆಗಾಗಿ, ಸ್ವಸಂಸ್ಕೃತಿಗಾಗಿ, ಆಶೆ ಆಕಾಂಕ್ಷೆಗಳಿಗಾಗಿ ಇರುವ ಅಭಿಮಾನಿಗಳನ್ನೊಳಗೊಂಡಿರುತ್ತದೆ. ಯಾವದೇ ದೇಶದ ಚರಿತ್ರೆಯೆಂದರೆ ಅಲ್ಲಿಯ ಜನತೆಯ ಜೀವನದ ನಾಗರಿಕತೆಯ–ಅವರ ರಾಷ್ಟ್ರೀಯತೆಯ ಉದಯ ಹಾಗೂ ಬೆಳವಣಿಗೆಗಳ ಇತಿಹಾಸವೇ ಸರಿ. ಇಂತು ಯಾವದೇ ದೇಶದ ರಾಷ್ಟ್ರೀಯತೆಯ ಅಧ್ಯಯನವು ಅತ್ಯಂತ ಮಹತ್ವದ್ದಾಗಿದೆ. ನಮಗೆ-

ಕನ್ನಡ ಜನಾಂಗಕ್ಕೆ–ಕರ್ನಾಟಕವು ಭಾರತದ ಒಂದು ವಿಭಾಗ ವಾಗಿರುವದರಿಂದ ಭಾರತದ ರಾಷ್ಟ್ರೀಯತೆಯ ಛಾಯೆ ಕನ್ನಡ ನಾಡಿನ ಮೇಲೂ ಹಾಗೂ ಕರ್ನಾಟಕದ ಛಾಯೆ ಭಾರತದ ಮೇಲೂ ಬಿಂಬಿಸುವದು ಸ್ವಾಭಾವಿಕ. ಈ ಪ್ರಕಾರ ಭಾರತ-ಕರ್ನಾಟಕಗಳ ರಾಷ್ಟ್ರೀಯತೆಯ ಇತಿಹಾಸಗಳು ಪರಸ್ಪರ ಪೂರಕವಾಗಿವೆ.

ಪ್ರತಿಯೊಬ್ಬನು ತನ್ನ ಕುಟುಂಬವನ್ನು, ಬಳಗವನ್ನು ಕುಲವನ್ನು, ಪಂಗಡವನ್ನು ತದ್ವಾರಾ ತನ್ನ ನಾಡನ್ನೂ ಅಂತಿಮವಾಗಿ ಮಾನವ ಜನಾಂಗವನ್ನು ಪ್ರೀತಿಸುತ್ತಾನೆ. ತನ್ನ ಮನೆ ಹಾಗೂ ಕುಟುಂಬದ ಬಗ್ಗೆ ಇರುವ ಭಾವ ನೆಯು ಸಾಕಾರ ಸ್ವರೂಪದ್ದಾಗಿದ್ದು ರಾಷ್ಟ್ರೀಯತೆಯು ಮಾತ್ರ ಸಮ್ಮಿಶ್ರವಾದುದು, ಹಾಗೂ ಅಮೂರ್ತವಾದುದೂ ಚೆನ್ಸಾತ್ರಗೋಚರವಾದುದೂ ಆಗಿದೆ. ಕುಟುಂಬದ ಬಗೆಗೆ ಇರುವ ಅನುರಾಗಕ್ಕಿಂತಲೂ ರಾಷ್ಟ್ರೀಯತೆಯು ಗುಣಾತ್ಮಕ ವಾಗಿ ಭಿನ್ನವಾಗಿದೆ. ಆದರೆ ಅದು ಮಾನವ ಜನಾಂಗದ ಬಗೆಗಿರುವ ಅಭಿಮಾನಕ್ಕೆ ಸನಿಹದ್ದಾಗಿದೆ,

# ೨ ಭಾರತದಲ್ಲಿ ಸಾಂಸ್ಕೃತಿಕ ಪುನರುಜ್ಜೀವನ ರಾಷ್ಟ್ರೀಯತೆಯ ಬೆಳವಣಿಗೆ

ರಾಷ್ಟ್ರದ ರಾಜಕೀಯ, ಔದ್ಯೋಗಿಕ, ಶೈಕ್ಷಣಿಕ, ಸಾಮಾಜಿಕ, ಸಾಂಸ್ಕೃತಿಕ ಹಾಗೂ ಸಾಂಪತ್ತಿಕ ಉನ್ನತಿಯೇ ರಾಷ್ಟ್ರೀಯ ಅಂತಿಮ ಗುರಿ. ಪರತಂತ್ರಕ್ಕೀಡಾದ ದೇಶದಲ್ಲಿ ರಾಷ್ಟ್ರೀಯತೆ ಹಾಗೂ ಸ್ವದೇಶಾಭಿಮಾನ ಇವೆರಡೂ ಸಮಾನಾರ್ಥಕವಾಗಿರುವಂತೆ ಭಾಸವಾಗುವದು. ಯಾಕೆಂದರೆ ದೇಶವನ್ನು ಪಾರತಂತ್ರ್ಯದಿಂದ ವಿಮೋಚನೆಗೊಳಿಸುವದೇ ರಾಷ್ಟ್ರದ ಮುಖ್ಯ ಉದ್ದೇಶ. ಪಾರತಂತ್ರ್ಯವು ಯಾವಾಗಲೂ ದೇಶದ ಪ್ರಗತಿಗೆ ಆತಂಕವಾಗಿರುತ್ತದೆ. ಅದೇ ರೀತಿಯಾಗಿ ಭಾರತೀಯ ರಾಷ್ಟ್ರೀಯ ಆದರ್ಶವು ಭಾರತೀಯರ ಸರ್ವತೋಮುಖ ಅಭಿವೃದ್ಧಿಗೊಳಿಸುವದಾಗಿದೆ. ಭಾರತವು ಅನೇಕ ಶತಮಾನಗಳಿಂದ ಪರಕೀಯ ಪ್ರಭುತ್ವಕ್ಕೊಳಪಟ್ಟಿದ್ದರಿಂದ ಭಾರ

ತೀಯರು ಸರ್ವಾಂಗೀಣ ಅಭಿವೃದ್ಧಿಯನ್ನು ಸಾಧಿಸುವದು ದುಸ್ತರವಾಗಿತ್ತು. ಯಾವದೇ ದೇಶವು ಯಾವದೇ ಕ್ಷೇತ್ರದಲ್ಲಿ ಅಭಿವೃದ್ಧಿ ಹೊಂದಬೇಕಾದರೆ ಅದಕ್ಕೆ ತನ್ನ ದೇಶದ ಹಿತವೇ ಪ್ರಧಾನವಾದ ಸರಕಾರವಿರತಕ್ಕದ್ದು. ಅರ್ಥಾತ್ ಅದಕ್ಕೆ ರಾಜಕೀಯ ಸ್ವಾತಂತ್ರ್ಯವಿರತಕ್ಕದ್ದು. ಈ ಕಾರಣದಿಂದಲೇ ಭಾರತೀಯ ರಾಷ್ಟ್ರೀಯತೆಯ ಮೂಲಗುರಿಯು ಸ್ವಾತಂತ್ರ್ಯ ಸಂಪಾದನೆಯಾಗಿತ್ತು. ಆ ಸ್ವಾತಂತ್ರ್ಯ ಸಂಪಾದನೆಗೆ ದೇಶಾಭಿಮಾನವು ಸಾಧನವಾಗಿತ್ತು. ಆ ಸ್ವದೇಶಾಭಿಮಾನಕ್ಕೆ ಭಾರತೀಯರ ಐಕ್ಯತೆಯು ಬುನಾದಿಯಾಗಿತ್ತು. ಆದರೆ ಭಾರತ ದೇಶವು ರಾಷ್ಟ್ರವಲ್ಲ, ಅದೊಂದು ಭೂಖಂಡ. ಅದರಲ್ಲಿ ಅನೇಕ ಜನಾಂಗ, ಬುಡಕಟ್ಟು, ಜಾತಿ, ಗುಂಪುಗಳಿವೆ. ಅದರಲ್ಲಿ ವಿವಿಧ ಧರ್ಮ, ಭಾಷೆ, ಸಂಪ್ರದಾಯಗಳಿವೆ ಆದ್ದರಿಂದ ಅದು ರಾಷ್ಟ್ರವೇ ಅಲ್ಲ ಎಂಬದೊಂದು ವಿಚಾರಸರಣಿ ಇತ್ತು, ಇದಲ್ಲದೆ ಭಾರತವು ಈ ಹಿಂದೆ ಅದೆಂದೂ ಏಕಚಕ್ರಾಧಿಪತ್ಯಕ್ಕೊಳಪಟ್ಟಿದ್ದಿಲ್ಲ. ಅದು ರಾಜಕೀಯವಾಗಿ ಹಲವಾರು ಚಿಕ್ಕಪುಟ್ಟ ದೇಶವಲ್ಲಿಯ ಈ ಬಗೆಯ ವೈವಿಧ್ಯತೆಯನ್ನು ಅಲ್ಲಗಳೆಯುದಾಗದಿದ್ದರೂ ಆ ಎಲ್ಲ ವೈವಿಧ್ಯತೆಯನ್ನು ಮಧ್ಯದಲ್ಲಿ ಪ್ರವಹಿಸುತ್ತಿರುವ ಸಂಸ್ಕೃತಿಯ ಸೂತ್ರವೊಂದೇ ಎಂಬುದನ್ನು ಯಾರೂ ಅಲ್ಲಗಳೆಯಲಾರರು.

ಮೇಲ್ಕಂಡ ವೈವಿಧ್ಯವು ಕೇವಲ ಭಾರತಕ್ಕಷ್ಟೇ ಸೀಮಿತವಾದುದಲ್ಲ. ಯಾಕೆಂದರೆ ಅದು ಪ್ರಪಂಚದ ಹಲವೆಡೆ

ದೃಗ್ಗೋಚರವಾಗುತ್ತದೆ. ಅಮೇರಿಕೆಯಲ್ಲಿ, ರಶಿಯಾದಲ್ಲಿ ಅನೇಕ ಜನಾಂಗಗಳಿವೆ. ಸ್ವಿತ್ಸರ್ಲಂಡದಲ್ಲಿ ನಾಲ್ಕು ಅಧಿಕೃತಭಾಷೆಗಳಿವೆ. ಇಂತಿದ್ದರೂ ಅವುಗಳಲ್ಲಿ ರಾಷ್ಟ್ರೀಯತೆಯ ಬೆಳವಣಿಗೆಗೆ ಕುಂದುಂಟಾಗಿಲ್ಲ. ಯಾಕೆಂದರೆ ಆಯಾ ದೇಶಗಳ ಜನರಲ್ಲಿ ಉಳಿದೆಲ್ಲ ವಿಷಯಗಳಲ್ಲಿ ಸಾಮ್ಯತೆ ಇವೆ, ಹೊಂದಾಣಿಕೆ ಇದೆ. ಅದೇ ರೀತಿಯಾಗಿ ಭಾರತದಲ್ಲೂ ಸಹ ಭಾರತದ ನಾನಾ ಭಾಗಗಳಲ್ಲಿಯ ಜನತೆಯನ್ನು ಒಂದುಗೂಡಿಸುವಂಥ ಒಂದು ಸಂಸ್ಕೃತಿಯು-ಭಾರತೀಯ ಸಂಸ್ಕೃತಿಯು ಒಡೆದು ಕಾಣುತ್ತದೆ. ಇದುವೇ ಎಲ್ಲ ಭಾರತೀಯರನ್ನು ಒಂದುಗೂಡಿಸುವ ಕಾರಣವಾಗಿದೆ. ಇದೇ ಮಾತನ್ನು ಡಾ. ಪಟ್ಟಾಭಿ ಸೀತಾರಾಮಯ್ಯನವರು ತಮ್ಮ "ಭಾರತದಲ್ಲಿ ರಾಷ್ಟ್ರೀಯ ಬೆಳವಣಿಗೆ" ಎಂಬ ಗ್ರಂಥದಲ್ಲಿ ವಿವೇಚಿಸಿದ್ದಾರೆ ಹಿಮಾಲಯದಿಂದ ಕನ್ಯಾಕುಮಾರಿಯವರೆಗೆ, ದ್ವಾರಕಾದಿಂದ ಸಿಲ್ಹೆಟವರೆಗೆ ಒಂದೇ ಸಂಸ್ಕೃತಿ ಒಂದೇ ಧರ್ಮ, ಒಂದೇ ತತ್ತ್ವಜ್ಞಾನ ಒಂದೇ ಸಂಪ್ರದಾಯ ಇರುತ್ತಿವೆಯೆಂದು ಅವರು ಪ್ರತಿಪಾದಿಸಿದ್ದಾರೆ. ಕಾರ್ಲ ಮಾರ್ಕ್ಸನ ಅಭಿಪ್ರಾಯವೂ ಇದೇ ಆಗಿದೆ.

ಬ್ರಿಟಿಶರು "ಒಡೆದು ಆಳು" ಅಥವಾ "ವಿಭಜಿಸಿ ಆಳು" ಎಂಬ ನೀತಿಯನ್ನು ಅನುಸರಿಸಿ ಭಾರತೀಯರಲ್ಲಿ ವೈವಿಧ್ಯತೆಯನ್ನು ಬಿಂಬಿಸಿ ಭಿನ್ನತೆಯ ಭೂತವನ್ನು ಸೃಷ್ಟಿಸಿ ಪರಸ್ಪರರು ಒಂದುಗೂಡದಂತೆ ಮಾಡಿದ ತಂತ್ರವು ಈ

ದೇಶದಲ್ಲಿ ಬಹಳಷ್ಟು ಅನಾಹುತವನ್ನು ಉಂಟುಮಾಡಿತ್ತು. ಆದರೆ ಪ್ರಾಚೀನ ಇತಿಹಾಸದತ್ತ ಲಕ್ಷ್ಯ ಹರಿಸಿದರೆ ಭಾರತವು ಒಂದು ವಿಶಾಲರಾಷ್ಟ್ರವೆಂದು ಸುಸ್ಪಷ್ಟವಾಗುತ್ತದೆ. ಆದರೆ ಬ್ರಿಟಿಶರ ಆಧಿಪತ್ಯವು ಸಮಗ್ರ ಭಾರತದ ತುಂಬೆಲ್ಲ ವ್ಯಾಪಕವಾದುದರಿಂದ ಹಾಗೂ ಅವರ ಆಡಳಿತೆಯು ಭದ್ರವಾದ ತಳಹದಿಯುಳ್ಳುದಾದುದರಿಂದ ದೇಶದ ತುಂಬೆಲ್ಲ ರಾಷ್ಟ್ರದ ಐಕ್ಯತೆಯುಂಟಾಯಿತು. ಇವಲ್ಲದೇ ರಾಜಮಾರ್ಗಗಳು, ರೈಲು ಅಂಚೆ, ತಂತಿ ಒಂದೇ ವಿಧದ ಶಿಕ್ಷಣ ಪ್ರಸಾರ ಇವು ಭಾರತೀಯರಲ್ಲಿ ಐಕ್ಯತಾ ಭಾವನೆಯನ್ನು ಜಾಗೃತಗೊಳಿಸಲು ಹಾಗೂ ಉದ್ದೀಪನಗೊಳಿಸಲು ಕಾರಣವಾದವು. ಭಾರತದ ಗವ್ಹರ್ನರ್ ಜನರಲ್‌ರಾದ ಲಾರ್ಡ ಆಯರ್ವಿನ್‌ರು "ಭಾರತದಲ್ಲಿ ರಾಜಕೀಯ ಜೀವನದ ಬೆಳವಣಿಗೆ" ಎಂಬ ಪ್ರಬಂಧದಲ್ಲಿ "ಬ್ರಿಟಿಷರ ಆಡಳಿತೆಯು ಭಾರತದ ಘಟನಾತ್ಮಕ ಜೀವನದ ಬೆಳವಣಿಗೆಗೆ ಅಡಿಪಾಯವನ್ನ ಅನುದ್ದೇಶಿತವಾಗಿ ಹಾಕಿತ್ತು" ಎಂದು ಹೇಳಿದ್ದಾರೆ. ಆಯರ್ವಿನ್‌ರ ಅಭಿಪ್ರಾಯವನ್ನು ನಾವು ಪೂರ್ಣತಃ ಒಪ್ಪದಿದ್ದರೂ ಆಳಿಕೆಯಿಂದ ಭಾರತದ ಪ್ರತಿಯೊಂದು ಭಾಗದಲ್ಲಿ ನಡೆದ ಸುಲಿಗೆಯು ಎಲ್ಲಾ ಭಾರತೀಯರನ್ನು ಒಂದುಗೂಡಿಸಲು ಅರ್ಥಾತ್ ರಾಜಕೀಯ ಐಕ್ಯತೆಯನ್ನುಂಟು ಮಾಡಲು ಕಾರಣವಾಯಿತು. ಇದರಂತೆ ಬ್ರಿಟಿಷರು ತಮ್ಮ ಪ್ರಭುತ್ವವನ್ನು ಬಿಗಿಗೊಳಿಸುವ ಉದ್ದೇಶದಿಂದ ಹಾಗೂ ದೇಶದಲ್ಲಿ ಪ್ರಬಲವಾದ ಹಾಗೂ

ಸುದಕ್ಷವಾದ ಆಡಳಿತೆಯನ್ನು ನಡೆಸಲೋಸುಗ ಏರ್ಪಡಿಸಿದ ರಾಜಮಾರ್ಗ ರೈಲ-ಅಂಚೆ, ತಂತಿ ಮೊದಲಾದ ಸಾಧನಗಳು ಭಾರತೀಯರಲ್ಲಿ ಪರಸ್ಪರ ಸಂಪರ್ಕವರ್ಧನೆಗೆ ಸಹಕಾರಿಯಾದವು. ಅವರು ಸನಿಹಕ್ಕೆ ಬರಲು, ಒಂದೆಡೆ ಕೂಡಲು ವಿಚಾರ ವಿನಿಮಯ ಮಾಡಲು ಆಸ್ಪದ ಉಂಟಾಯಿತು. ಇಂತು ಭಾರತಿಯರು ತಮ್ಮ ಅವನತಿಗೆ ಹಿಂದುಳಿಯುವಿಕೆಗೆ ಪರಕೀಯ ಸತ್ತೆಯೇ ಕಾರಣವೆಂದು ಅದನ್ನು ತೊಡೆದು ಹಾಕಿ ದೇಶವು ಸ್ವತಂತ್ರವಾದಾಗಲೇ ಮಾತ್ರ ಅದು ತನ್ನ ಅಭಿವೃದ್ಧಿಯನ್ನು ಸಾಧಿಸಬಲ್ಲದೆಂಬುದನ್ನೂ ಕಂಡುಕೊಂಡರು.

ಭಾರತದಲ್ಲಿ ಧರ್ಮವನ್ನು ಬಿಟ್ಟು ರಾಜಕೀಯವಿಲ್ಲ, ರಾಜಕೀಯವನ್ನು ಬಿಟ್ಟು ಧರ್ಮವಿಲ್ಲ. ಅವು ಪರಸ್ಪರ ಒಂದನ್ನೊಂದು ಹೊಂದಿಕೊಂಡಿವೆ. ಭಾರತದಲ್ಲಿ ಸಾಂಸ್ಕೃತಿಕ ಪುನರುಜ್ಜೀವನವು ಬ್ರಹ್ಮೋ ಸಮಾಜದ ಸಂಸ್ಥಾಪಕರಾದ ರಾಜಾರಾಮಮೋಹನರಾಯರಿಂದ ಪ್ರಾರಂಭವಾಯಿತೆನ್ನಬಹುದು. ಅಂತೆಯೇ ಅವರನ್ನು ಸಮಾಜ ಸುಧಾರಕರೆಂದೂ ಧರ್ಮೋದ್ಧಾರಕರೆಂದೂ ಕರೆಯಲಾಗುತ್ತದೆ. ಅವರನ್ನು ಡಾ. ಮ್ಯಾಕ್ನಿಕೋಲರು "ನವಯುಗದ ಮನ್ವಂತರ" ಎಂದೂ ಸದಾ ಪ್ರಜ್ವಲಿಸುವ ರಾಷ್ಟ್ರೀಯತೆಯ ಕಾರಣಕರ್ತರೆಂದೂ ಕರೆದಿದ್ದಾರೆ. ಯಾಕೆಂದರೆ ರಾಜಾರಾಮಮೋಹನರು ಹಿಂದೂ ಸಮಾಜವನ್ನು ಸಂಪ್ರದಾಯಬದ್ಧ ಜಾಡ್ಯದಿಂದ ಮುಕ್ತಗೊಳಿಸಿ ಬ್ರಹ್ಮೋ ಸಮಾಜದ ತತ್ವಗಳಿಂದ ಜನರನ್ನು

ಜಾಗೃತಗೊಳಿಸಿದರು. ಇಸ್ಲಾಂ ಹಾಗೂ ಕ್ರೈಸ್ತ ಧರ್ಮಗಳತ್ತ ಒಲಿಯುತ್ತ ಹೊರಟಿದ್ದ ಹಿಂದೂ ಸಮಾಜವನ್ನು, ಸ್ವಾಮಿ ದಯಾನಂದರು ತಡೆಗಟ್ಟಿ ತಾವು ಸ್ಥಾಪಿಸಿದ ಆರ್ಯ ಸಮಾಜದತ್ತ ಹೊರಳಿಸಿದರು. ಹಿಂದೂಗಳ ಧರ್ಮಗ್ರಂಥವಾದ ವೇದದ ಮಹತ್ವವನ್ನೂ ಪ್ರಭಾವವನ್ನೂ ಬಿಂಬಿಸಿದರು. ಹಾಗೂ ಹಿಂದೂ ಧರ್ಮ ತತ್ವಗಳ ಶ್ರೇಷ್ಠತೆಯನ್ನು ಎತ್ತಿತೋರಿಸಿದರು. ಆ ಮಹನೀಯದ್ವಯರು ಕೈಕೊಂಡ ಧಾರ್ಮಿಕ ಜಾಗೃತಿಯು ಬೆಳೆಯುತ್ತ ಬೆಳೆಯುತ್ತ ಅದುವೇ ರಾಷ್ಟ್ರೀಯ ಆಂದೋಲನಕ್ಕೆ ತಳಹದಿಯಾಯಿತು ಸ್ವಾಮಿ ರಾಮಕೃಷ್ಣಪರಮಹಂಸರು ಹಾಗು ಅವರ ಶಿಷ್ಯೋತ್ತಮರಾದ ಸ್ವಾಮಿ ವಿವೇಕಾನಂದರು ಹಿಂದೂ ಧರ್ಮದ ಪುನರುತ್ಥಾನಕ್ಕೆ ಮಹತ್ವದ ಕಾಣಿಕೆಯನ್ನು ಸಲ್ಲಿಸಿದ್ದಾರೆ. ಕವೀಂದ್ರ ರವೀಂದ್ರನಾಥ ಠಾಕೂರರೂ ಮಹೇಂದ್ರ ಅರವಿಂದನಾಥ ಘೋಷರೂ ಭಾರತೀಯರಲ್ಲಿ ರಾಷ್ಟ್ರೀಯತೆಯನ್ನು ಹೆಚ್ಚಿಸಿದರು. ಆಗಿನ ಧಾರ್ಮಿಕ ಹಾಗೂ ಸಾಂಸ್ಕೃತಿಕ ಪುನರುಜ್ಜೀವನದಲ್ಲಿ ರಾಷ್ಟ್ರೀಯತೆಯು ತನ್ಮಾತ್ರ ಬೆಳೆಯತೊಡಗಿತು. "ಏಳಿರಿ ಎಚ್ಚರಾಗಿರಿ, ಆಧ್ಯಾತ್ಮಿಕ ಶಕ್ತಿಯಿಂದ ಪ್ರಪಂಚವನ್ನೇ ಜಯಿಸುವವರೆಗೆ ವಿರಮಿಸಬೇಡಿ" ಎಂಬ ಸಂದೇಶವನ್ನು ಸ್ವಾಮಿ ವಿವೇಕಾನಂದರು ಭಾರತೀಯರಿಗೆ ಇತ್ತಿದ್ದಾರೆ. ಆಯರಿಸ್ ಮಹಿಳೆಯಾದ ಶ್ರೀಮತಿ ಆ್ಯನಿ ಬೆಸೆಂಟರು ಥಿಯೋಸೊಫಿಕಲ್ ಸೊಸಾಯಿಟಿಯ ಸಂಸ್ಥಾಪಕ ಅಧ್ಯಕ್ಷರಾಗಿದ್ದರಲ್ಲದೆ ಆವರು ಹಿಂದೂ ಧರ್ಮವನ್ನು

ಸ್ವೀಕರಿಸಿ ಆದರ ತತ್ವಗಳು ಹಾಗೂ ಸಂಸ್ಕೃತಿಗಳು ಪಾಶ್ಚಾತ್ಯ ಸಂಸ್ಕೃತಿಗಿಂತ ಶ್ರೇಷ್ಠತರವೆಂದು ಬಹಿರಂಗವಾಗಿ ಸಾರಿದ್ದಾರೆ. ಈ ಪ್ರಕಾರ ೧೮ನೆಯ ಮತ್ತು ೧೯ನೆಯ ಶತಮಾನಗಳಲ್ಲಿ ಭಾರತದಲ್ಲಿ ನಡೆದ ಸಾಮಾಜಿಕ ಹಾಗೂ ಧಾರ್ಮಿಕ ಜಾಗೃತಿಯ ಆಂದೋಲನಗಳು ಭಾರತೀಯ ರಾಷ್ಟ್ರೀಯತೆಯು ಅಂಕುರಿಸಲು ಕಾರಣವಾದವು.

## ೩ ಪಾಶ್ಚಾತ್ಯ ಶಿಕ್ಷಣ

ಭಾರತೀಯರಿಗೆ ಪಾಶ್ಚಾತ್ಯ ಶಿಕ್ಷಣವನ್ನು ನೀಡಬೇಕು ಇಲ್ಲವೆ ಪೌರ್ವಾತ್ಯ ಶಿಕ್ಷಣವನ್ನು ಮುಂದುವರಿಸಬೇಕೋ ಎಂಬ ಬಗೆಗೆ ಬಹಳಷ್ಟು ವಾದವಿವಾದಗಳಾಯಿತು. ಪಾರ್ಲಿಮೆಂಟಿನ ಸದಸ್ಯರಾದ ಲಾರ್ಡ ಮೆಕಾಲೆಯವರು ಭಾರತದ ಹೊಸ ಶಿಕ್ಷಣ ಧೋರಣೆಯನ್ನು ನಿರೂಪಿಸುವಲ್ಲಿ ಅಗ್ರಪಾತ್ರ

ವಹಿಸಿದರು. ಅವರು ರೂಪಿಸಿದ ಶಿಕ್ಷಣ ಪದ್ಧತಿಯಲ್ಲಿ ಒಡೆದು ಕಾಣುವ ಅಂಶಗಳೆಂದರೆ :

೧) ಭಾರತೀಯರಿಗೆ ಪಾಶ್ಚಾತ್ಯ ಪದ್ಧತಿಯ ಶಿಕ್ಷಣ ವನ್ನಿತ್ತು ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ ಹಾಗೂ ರಾಜಕೀಯವಾಗಿ ಬ್ರಿಟಿಷರು ಹಾಗೂ ಭಾರತೀಯರಲ್ಲಿ ಪರಸ್ಪರ ಸಂಪರ್ಕ ಬೆಳೆಯಿಸಿ ಒಂದುಗೂಡಿಸುವದು.

೨) ಇಂಗ್ಲಿಷ ಶಿಕ್ಷಣದ ಮುಖಾಂತರ ಭಾರತೀಯರಿಗೆ ಬ್ರಿಟಿಷ್ ಸರಕುಗಳಲ್ಲಿ ಅಭಿರುಚಿಯನ್ನು ಹುಟ್ಟಿಸಿ ಬ್ರಿಟಿಷ್ ಮಾರುಕಟ್ಟೆಯನ್ನು ಬೆಳೆಸುವದು.

(೩) ಹಿಂದಿ ಮಾತನಾಡುವವರಿಗೆ ಇಂಗ್ಲಿಷ ಶಿಕ್ಷಣವನ್ನಿತ್ತು ಅವರನ್ನು ಸರಕಾರಿ ಆಡಳಿತದ ಕೆಳಹಂತದಲ್ಲಿ ಯುರೋಪಿಯನ್ನರ ಬದಲಾಗಿ ನೇಮಿಸುವದು ಹಾಗೂ ತದ್ವಾರಾ ಆಡಳಿತಾತ್ಮಕ ವೆಚ್ಚವನ್ನು ಕಡಿಮೆ ಮಾಡುವದು.

ಮೇಲ್ಕಂಡ ಕಾರಣಗಳಿಂದ ಬ್ರಿಟಿಷ್ ಸರಕಾರದ ಆಡಳಿತ ವೆಚ್ಚವು ಕಡಿಮೆಯಾದುದರಿಂದ ಲಾರ್ಡ ಮೆಕಾಲೆಯವರು ಬ್ರಿಟಿಷ್ ಸರಕಾರದ ಪ್ರಶಂಸೆಯನ್ನು ಪಡೆದರು. ಇದಲ್ಲದೆ ೧೮೩೩ನೆ ಸನದಿನ ಪ್ರಕಾರ ಭಾರತದಲ್ಲಿ ಶಿಕ್ಷಣ ಪ್ರಸಾರ ಮಾಡಲು ೨೦ ಲಕ್ಷ ರೂಪಾಯಿಗಳನ್ನು ತೆಗೆದಿಡಲಾಯಿತು.

ಅದೇ ರೀತಿಯಾಗಿ ಭಾರತೀಯರು ಇಂಗ್ಲಿಷ ಶಿಕ್ಷಣವನ್ನು ಹೊಂದಿ ಸರಕಾರದ ಆಡಳಿತದಲ್ಲಿ ನೌಕರಿ ಚಾಕರಿಗಳಲ್ಲಿ ಕೆಳ ದರ್ಜೆಯವಿದ್ದರೂ ಪ್ರವೇಶಿಸಿ ದೊರೆತುದರಿಂದ ಮತ್ತು ಆ ಕುರಿತು ಸಂಬಳ ದೊರೆಯುಹತ್ತಿದುದರಿಂದ ಅವನ್ನು ದೊರಕಿ ಸುವ ಹಂಬಲವು ಭಾರತೀಯರಲ್ಲಿ ಬೆಳೆಯುಹತ್ತಿತು. ಹೀಗಾಗಿ ಭಾರತದಲ್ಲಿ ಕಾರಕೂನರದೊಂದು ಸೇನೆಯೇ ತಯಾರಾಗ ಹತ್ತಿತು.

ಈ ಪಾಶ್ಚಾತ್ಯ ಶಿಕ್ಷಣದ ಪರಿಣಾಮವಾಗಿ ಭಾರತೀಯರು ಪಾಶ್ಚಾತ್ಯರ ರೀತಿ-ನೀತಿಗಳನ್ನು ರೂಢಿ-ಸಂಪ್ರದಾಯಗಳನ್ನು ಅನುಕರಿಸಹತ್ತಿದರು. ಅವರ ವೇಷಭೂಷಣದ ಗುಲಾಮರಾದರು. ಬರಬರುತ್ತ ತಮ್ಮ ಸನಾತನ ಸಂಸ್ಕೃತಿಯಲ್ಲಿದ್ದ ನಂಬುಗೆಯನ್ನು ಕಳೆದುಕೊಳ್ಳಹತ್ತಿದರು. ಬ್ರಿಟಿಷರ ಸಂಪರ್ಕ ಹಾಗೂ ಪಾಶ್ಚಾತ್ಯ ಶಿಕ್ಷಣ ಇವುಗಳ ಪರಿಣಾಮವು ಮೊದಮೊದಲು ಗುಪ್ತಗಾಮಿಯಾಗಿದ್ದರೂ ಬಹುಬೇಗ ದೂರಗಾಮಿಯಾದ ಮಾರ್ಪಾಟನ್ನುಂಟು ಮಾಡಿದವು.

ಅದೇನೆ ಇರಲಿ, ಬ್ರಿಟಿಷರು ತುಂಬಾ ಸ್ವಾತಂತ್ರ್ಯಪ್ರಿಯರು, ದೇಶಾಭಿಮಾನಿಗಳು, ಧೀರೋದಾತ್ತ ಸ್ವಭಾವದವರು. ಇಂಗ್ಲಿಷ ಸಾಹಿತ್ಯದ ತುಂಬೆಲ್ಲ ಸ್ವಜನಾಭಿಮಾನ, ದೇಶಪ್ರೇಮ, ಸ್ವದೇಶಾಭಿಮಾನ ಹಾಗೂ

ಜನತಾಸತ್ತಾತ್ಮಕ ಭಾವನೆಗಳು, ವಿಚಾರಗಳು ಸಾಹಸ ಶೌರ್ಯ, ಧೈರ್ಯ, ಸ್ವಭಾಷಾಭಿಮಾನ ತುಂಬಿತುಳುಕುತ್ತವೆ. ಅವುಗಳ ಪರಿಜ್ಞಾನವು ಭಾರತೀಯರಿಗೆ ಇಂಗ್ಲಿಷ ಶಿಕ್ಷಣದ ಮೂಲಕ ಆಗಹತ್ತಿತು. ಮಿಲ್ಟನ್, ಬರ್ಕ, ಹರ್ಬರ್ಟ ಸ್ಪೆನ್ಸರ್ ಮುಂತಾದವರ ವಿಚಾರ ಪ್ರಣಾಲಿಗಳನ್ನು ಭಾರತೀಯರು ಅಧ್ಯಯನಮಾಡಹತ್ತಿದರು.

ಭಾರತೀಯರು ಬ್ರಿಟನ್ನಿಗೂ ಯುರೋಪದ ಮತ್ತಿತರ ದೇಶಗಳಿಗೆ ಹೋಗಿ ಬರಹತ್ತಿದರು. ಜಗತ್ತಿನಲ್ಲಿಯ ಇತರ ಸ್ವತಂತ್ರ ರಾಷ್ಟ್ರಗಳಲ್ಲಿಯ ಸುಖಮಯವಾದ ಜನಜೀವನವನ್ನು ಪ್ರತ್ಯೇಕ ಕಂಡುಕೊಂಡರು. ಪ್ರಜಾಸತ್ತಾತ್ಮಕ ರಾಜ್ಯವ್ಯವಸ್ಥೆಯಲ್ಲಿಯ ಕಾರ್ಯಪದ್ಧತಿಯನ್ನೂ ಭಾರತದಲ್ಲಿಯ ಆಡಳಿತ ಪದ್ಧತಿಯನ್ನೂ ತುಲನಾತ್ಮಕವಾಗಿ ಪರಿಶೀಲಿಸಹತ್ತಿದರು. ಇಂಗ್ಲಿಷ ಶಿಕ್ಷಣ ಹೊಂದಿದ ಸುಮಾರು ೭೨ ಜನ ಯುವಕರು ಭಾರತದ ಪ್ರತಿಯೊಂದು ಭಾಗದಲ್ಲಿ ಸಂಚರಿಸಿ ಸ್ವದೇಶಾಭಿಮಾನದ ಹಾಗೂ ರಾಷ್ಟ್ರೀಯ ವಿಚಾರಗಳನ್ನು ಪ್ರಸಾರ ಮಾಡಿದರು. ಇಂತು ಅವರು ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ ಮತ್ತು ರಾಜಕೀಯ ಆಂದೋಲನದ ಕರ್ಣಧಾರತ್ವವನ್ನು ಪರ್ಯಾಯವಾಗಿ ವಹಿಸಿದರು.

## ೪ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್

ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ ೧೮೮೫ರಲ್ಲಿ ಎ. ಒ. ಹ್ಯೂಮ್‌ರ ಪ್ರೇರಣೆಯಿಂದ ಸ್ಥಾಪಿತವಾಯಿತು. ಮೊದಲನೆಯ ರಾಷ್ಟ್ರೀಯ ಕಾಂಗ್ರೆಸ್ ಅಧಿವೇಶನವು ಮುಂಬಯಿಯಲ್ಲಿ ಸೇರಿತು. ಕಾಂಗ್ರೆಸ್ ಚಟುವಟಿಕೆಗಳೆಂದರೆ, ಮೊದಲ ಹಂತದಲ್ಲಿ ಸರಕಾರಕ್ಕೆ ಅರ್ಜಿ ಸಲ್ಲಿಸುವದು, ತಮ್ಮ ಕೋರಿಕೆಗಳನ್ನು, ಬೇಡಿಕೆಗಳನ್ನು, ಮುಂದೊಡ್ಡುವದು, ಶಿಷ್ಟ ಮಂಡಲ ಕಳಿಸುವದು, ಮನವಿಗಳನ್ನು, ಮಾನಪತ್ರಗಳನ್ನು ಅರ್ಪಿಸುವದು. ಬರಬರುತ್ತ ಕಾಂಗ್ರೆಸ್ ರಾಷ್ಟ್ರೀಯತೆಯನ್ನು ಪ್ರಚುರಪಡಿಸಹತ್ತಿದರು. ಇದರಿಂದ ರಾಷ್ಟ್ರೀಯತೆಯು ಭಾರತದ ಹಳ್ಳಿ ಪಳ್ಳಿಗಳಿಗೂ ತಲುಪಹತ್ತಿತು. ಭಾರತದಲ್ಲಿ ರಾಷ್ಟ್ರೀಯತೆಯ ವಿಕಾಸದ ಚರಿತ್ರೆಯೆಂದರೆ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ಸಿನ ಆಂದೋಲನದ ಇತಿಹಾಸವೆಂದು ಸ್ಥೂಲವಾಗಿ ಹೇಳಬಹುದಾಗಿದೆ.

ಕಾಂಗ್ರೆಸ್ಸಿನ ಆಂದೋಲನವು ಮಂದಗಾಮಿಯಾದುದೆಂದು ಆಕ್ಷೇಪಿಸಿದ ಹಲವಾರು ತೀವ್ರಗಾಮಿಗಳು ಕಾಂಗ್ರೆಸ್ಸಿನಿಂದ (೧೯೦೭—೧೯೧೬) ವರೆಗೆ ದೂರವಿದ್ದೇ ಚಳವಳಿಯನ್ನು ನಡೆಸಿದ್ದರು. ಅದೇ ಬಗೆಯಾಗಿ ಮಂದಗಾಮಿಗಳು ೧೯೧೮ ರಲ್ಲಿ ಕಾಂಗ್ರೆಸ್ಸಿನಿಂದ ಸಿಡಿದುಹೋದರೂ ರಾಷ್ಟ್ರದ ಶಕ್ತಿಗಳನ್ನು ಬಲಪಡಿಸಲು ತಮ್ಮದೇ ಆದ ರೀತಿಯಲ್ಲಿ ರಾಷ್ಟ್ರೀಯತೆಯನ್ನು ಘೋಷಿಸುತ್ತಲೇ ಇದ್ದರು. ಮಂದಗಾಮಿಗಳಿಗೆ ಮಾನ್ಯ ಶ್ರೀ ಗೋಪಾಲಕೃಷ್ಣ ಗೋಖಲೆಯವರೂ ತೀವ್ರಗಾಮಿಗಳಿಗೆ ಲೋಕಮಾನ್ಯ ಬಾಲಗಂಗಾಧರ ಟಿಳಕರೂ ಅಧ್ವರ್ಯುಗಳಾಗಿದ್ದರು. ಅವರು ಶೈಕ್ಷಣಿಕ ಜಾಗೃತಿಯನ್ನು ಸಾಮಾಜಿಕ ಸುಧಾರಣೆಯನ್ನು ಸಾಂಸ್ಕೃತಿಕ ಚಟುವಟಿಕೆಗಳನ್ನು ಪುರಸ್ಕರಿಸುವದರ ಜೊತೆಗೆ ರಾಷ್ಟ್ರೀಯತೆಯನ್ನೂ ಬೆಳೆಸಿದರು.

ಭಾರತೀಯರಲ್ಲಿ ರಾಷ್ಟ್ರೀಯತೆಯು ಕ್ರಮಕ್ರಮೇಣ ಬೆಳೆಯತೊಡಗಿದುದು ಆಗಿನ ಆಳರಸರಿಗೆ ತಲೆಶೂಲೆಯಾಗಿತ್ತು. ಅದನ್ನು ಕುಗ್ಗಿಸಬೇಕೆಂದು ಬಗ್ಗುಬಡಿಯಬೇಕೆಂದು ಅವರ ಹವಣಿಕೆಯಾಗಿತ್ತು. ಭಾರತೀಯರೆಲ್ಲ ಒಂದಾಗಿದ್ದರೆ ತಮ್ಮ ಆಟ ನಡೆಯದೆಂದು ಅವರು ಮನಗಂಡಿದ್ದರು. ಅಂತೆಯೇ ಭಾರತೀಯರಲ್ಲಿ ಅನೈಕ್ಯತೆಯನ್ನುಂಟುಮಾಡುವದೇ ಅವರ ಧೋರಣೆಯಾಗಿತ್ತು. ಭಾರತೀಯರಲ್ಲಿ ಧಾರ್ಮಿಕ ಭಾವನೆಯು ಪ್ರಬಲವಾಗಿರುವನ್ನು ಕಂಡುಕೊಂಡ ಬ್ರಿಟಿಶರು ಅವರಲ್ಲಿ

ಜಾತೀಯತೆಯ ದ್ವೇಷಾಗ್ನಿಯನ್ನು ಹೊತ್ತಿಸಿ ಸಂದರ್ಭ ಒದಗಿದಾಗೆಲ್ಲ ಅದಕ್ಕೆ ಗಾಳಿಯನ್ನು ಬೀಸಹತ್ತಿದರು. ಅದಕ್ಕೆಂದೇ ಅವರು ಹಿಂದುಗಳ ವಿರುದ್ಧ ಮುಸ್ಲಿಮರನ್ನು ಎತ್ತಿಕಟ್ಟಿಕೊಂಡರು. ಮುಸ್ಲಿಮರು ರಾಷ್ಟ್ರೀಯ ಭಾವನಾ ಪ್ರೇರಿತರಾದರೆ ಬ್ರಿಟಿಷ ಆಧಿಪತ್ಯಕ್ಕೆ ಭಾರತದಲ್ಲಿ ಉಳಿಗಾಲವಿಲ್ಲವೆಂದು ಬ್ರಿಟಿಷರಿಗೆ ಮನದಟ್ಟಾಗಿತ್ತು. ಆದ್ದರಿಂದ ಅವರು ಮುಸ್ಲಿಮರಿಗೆ ವಿಶೇಷ ಸೌಕರ್ಯ ಸೌಲಭ್ಯಗಳನ್ನು ಕಲ್ಪಿಸಿ ತಾವು ಅಲ್ಪಸಂಖ್ಯಾಕರೆಂಬ ಭಾವನೆ ಅವರಲ್ಲಿ ಬೆಳೆಯುವಂತೆ ರಾಷ್ಟ್ರೀಯ ಆಂದೋಲನದಿಂದ ಅವರು ವಿಮುಖರಾಗುವಂತೆ ಮಾಡಹತ್ತಿದರು. ರಾಷ್ಟ್ರೀಯತೆ ಉಗಮವಾದುದು ಬಂಗಾಲದಲ್ಲಿ. ಆದು ಅಲ್ಲಿಂದಲೇ ಕ್ರಮಕ್ರಮೇಣ ಇನ್ನಿತರ ಪ್ರಾಂತಗಳಿಗೂ ಪಸರಿಸಹತ್ತಿತು. ಅದಕ್ಕೆ ತಡೆಹಾಕಬೇಕೆಂಬ ಉದ್ದೇಶದಿಂದ ೧೯೦೫ರಲ್ಲಿ ಭಾರತದ ಗವ್ಹರ್ನರ ಜನರಲ್‌ರಾದ ಲಾರ್ಡ ಕರ್ಝನ್‌ರು ಬಂಗಾಲ ಪ್ರಾಂತವನ್ನು ಇಬ್ಭಾಗ ಮಾಡಿ ಬಹು ಸಂಖ್ಯಾತ ಮುಸ್ಲೀಮರಿದ್ದ ಬಂಗಾಲ ಒಂದು ಹಾಗೂ ಇನ್ನಿತರ ಬಹು ಸಂಖ್ಯಾತರಿದ್ದ ಬಂಗಾಲ ಒಂದು ಈ ಪ್ರಕಾರ ಇಬ್ಭಾಗ ಮಾಡಿದರು. ಇದು ಭಾರತೀಯ ರಾಷ್ಟ್ರೀಯತೆಗೆ ಆಹ್ವಾನವಾಗಿ ಪರಿಣಮಿಸಿತು. ತತ್ಪರಿಣಾಮವಾಗಿ ಭಾರತೀಯ ರಾಷ್ಟ್ರ....ಕೋಪೋದ್ರಿಕ್ತನಾದಂತೆ ಕಾಣಹತ್ತಿತು. ಬಂಗಾಲ ವಿಭಜನೆಯ (ವಂಗಭಂಗದ) ವಿರುದ್ಧ ಬಂಗಾಲದಷ್ಟೇ ಏಕೆ ಇಡೀ ದೇಶವ್ಯಾಪಕವಾದ ಆಂದೋಲನ

ನಡೆಯಿತು. ವಾತಾವರಣವು ಪ್ರಕ್ಷುಬ್ಧವಾಯಿತು. ಕವಿಗಳು, ಲೇಖಕರು, ಉಪನ್ಯಾಸಕರು, ರಾಜಕೀಯ ಮುಂದಾಳುಗಳು, ವೃತ್ತಪತ್ರಿಕಾರ್ತರು ದೇಶವ್ಯಾಪಿಯಾದ ಆಂದೋಲನವನ್ನು ನಡೆಸಿ ಸಮಗ್ರ ಭರತಖಂಡ ಒಂದೇ ಎಂಬ ಭಾವವನ್ನು ಜನತೆಯಲ್ಲಿ ಬಿಂಬಿಸಿದರು. ರಾಜಕೀಯ ಆಂದೋಲನದ ಜೊತೆಗೆ ಸ್ವದೇಶಿ ವ್ರತ. ಸ್ವದೇಶಿ ಪ್ರಚಾರ, ಔದ್ಯೋಗಿಕ ಸ್ವಾವಲಂಬನೆ, ಆರ್ಥಿಕ ಸ್ವಾವಲಂಬನೆ ಇವುಗಳಿಗೆ ತುಂಬಾ ಪುರಸ್ಕಾರ ದೊರೆಯಿತು. ವಂಗಭಂಗದ ವಿರುದ್ಧ ಇಡೀ ರಾಷ್ಟ್ರವೇ ಸಿಡಿದೆದ್ದುದರಿಂದ ಬ್ರಿಟಿಶರು ಬಂಗಾಲ ಪ್ರಾಂತವನ್ನು ಮೊದಲಿನಂತೆ ೧೯೧೨ರಲ್ಲಿ ಒಂದುಗೂಡಿಸಬೇಕಾಗಿ ಬಂದಿತು. ಇಂತು ಇಬ್ಭಾಗಗೊಂಡಿದ್ದ ಬಂಗಾಲವು ಏಕಮೇವ ಬಂಗಾಲವಾಯಿತು. ಮತ್ತದರಿಂದ ಭಾವೈಕ್ಯತೆ ರಾಷ್ಟ್ರೀಯತೆಗಳು ಮೊದಲಿನಂತೆ ಚಿಗುರಹತ್ತಿದವು.

## ೫ ಭಾರತದಲ್ಲಿ ಕರ್ನಾಟಕದ ಅಸ್ತಿತ್ವ

ಕರ್ನಾಟಕದಲ್ಲಿ ರಾಷ್ಟ್ರೀಯತ್ವದ ಬೆಳವಣಿಗೆಯನ್ನು ಭಾರತೀಯ ರಾಷ್ಟ್ರೀಯತ್ವದ ಬೆಳವಣಿಗೆಯ ಹಿನ್ನೆಲೆಯಲ್ಲಿ ಅಭ್ಯಾಸ ಮಾಡಬೇಕಾಗುವದು. ಕೆಲವು ಜನರ ಅಭಿಪ್ರಾಯ ದಂತೆ ಭಾರತವು ಒಂದು ರಾಷ್ಟ್ರವೆಂದು ಕರೆಯಿಸಿಕೊಳ್ಳಲ್ಪಡುತ್ತಿದ್ದಿಲ್ಲ. ಏಕೆಂದರೆ ಇಡೀ ಭಾರತಕ್ಕೆ ಹಿಮಾಲಯದಿಂದ ಕನ್ಯಾಕುಮಾರಿಯ ವರೆಗೆ ತನ್ನದೇ ಆದ ಏಕತಂತ್ರ ಸರಕಾರ (Common Government) ವಿದ್ದಿಲ್ಲ. ಭಾರತದಲ್ಲಿ ಅನೇಕ ರಾಜ್ಯಗಳು ಮೇಲಿಂದ ಮೇಲೆ ಪರಸ್ಪರ ಯುದ್ಧವನ್ನು ಮಾಡುತ್ತಿದ್ದವು. ಆಂಧ್ರ, ಮಹಾರಾಷ್ಟ್ರ, ಬಂಗಾಲ, ಕಾಶ್ಮೀರ, ಸಿಂಧ, ಮಾಳ್ವಾ ಮತ್ತು ಕನೋಜ ಮೊದಲಾದ ರಾಜ್ಯಗಳಿದ್ದವು. ಈಗಿನ ಪಾರಿಭಾಷಿಕೆಯಲ್ಲಿ ಇಡೀ ಭಾರತಕ್ಕೆ ರಾಷ್ಟ್ರವೆಂದು ಕರೆಯುತ್ತಾರೆ. ಅಂಗ, ವಂಗ, ಕಲಿಂಗ, ಕಾಶ್ಮೀರ ಮುಂತಾದವುಗಳು ಭಾರತ ದೇಶದ ಭಾಗಗಳೆಂದು

ವರ್ಣಿಸಲ್ಪಟ್ಟಿವೆ. ಐಹೊಳೆ ಶಿಲಾಶಾಸನದಲ್ಲಿ ಎರಡನೇ ಪುಲಕೇಶಿಯು ಪ್ರಭುತ್ವವು ಮೇಲೆ ಹೇಳಿದ ರಾಜ್ಯಗಳ ಮೇಲೆ ಇತ್ತೆಂದು ಉಲ್ಲೇಖಿಸಿದೆ. ಚಾಲುಕ್ಯರು, ಕದಂಬರು,ಗಂಗರು ಮತ್ತು ಯಾದವರು ದೂರ ದೂರ ದೇಶಗಳಲ್ಲಿ ಕರ್ನಾಟಕದ ಹಿರಿಮೆಯನ್ನು ಮೆರೆಯಿಸಿದರು. ಬದಾಮಿಯ ಚಾಲುಕ್ಯರು, ರಾಷ್ಟ್ರಕೂಟರು ಮತ್ತು ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಕರ್ನಾಟಕದ ಸಾಮ್ರಾಜ್ಯವು ವಿಸ್ತಾರವಾಗಿಯೂ ಪ್ರಬಲವಾಗಿಯೂ ಇತ್ತೆಂದು ಹೇಳಬಹುದು. ಹೊಯ್ಸಳರು ಕೃಷ್ಣಾನದಿಯ ದಕ್ಷಿಣಕ್ಕೂ, ಸೇವುಣರು (ಯಾದವರು) ಕೃಷ್ಣಾನದಿಯ ಉತ್ತರಕ್ಕೂ ಕೆಲಕಾಲ ಅಧಿಕಾರ ನಡೆಸಿದರು. ಸುಪ್ರಸಿದ್ಧ ವಿಜಯನಗರ ಸಾಮ್ರಾಜ್ಯವು ಕೂಡ ದಕ್ಷಿಣದಲ್ಲಿ ರಾಮೇಶ್ವರ, ಲಂಕಾದ್ವೀಪ ಕನ್ಯಾಕುಮಾರಿಯ ವರೆಗೆ ಹಬ್ಬಿತ್ತು. ಆದರೆ ಅದು ಉತ್ತರಕ್ಕೆ ಕೃಷ್ಣಾನದಿಯನ್ನು ದಾಟಿರಲಿಲ್ಲ. ಕಲ್ಬುರ್ಗಿ, ರಾಯಚೂರ ಮತ್ತು ಬೀದರ ಜಿಲ್ಹೆಗಳು ಕೆಲವುಕಾಲ ಕಾಕತೀಯರ ಆಡಳಿತಕ್ಕೆ ಸೇರಿದ್ದವೆಂದು ಇತಿಹಾಸದಿಂದ ತಿಳಿದು ಬರುತ್ತದೆ. ೧೩೩೬ರಲ್ಲಿ ವಿಜಯನಗರ ಸಾಮ್ರಾಜ್ಯವು ಹಂಪೆಯಲ್ಲಿ ಸ್ಥಾಪಿತವಾಯಿತು. ೧೩೪೭ರಲ್ಲಿ ಬಹಮನಿ ಸಾಮ್ರಾಜ್ಯವು ಕಲ್ಬುರ್ಗಿಯಲ್ಲಿ ಸ್ಥಾಪಿತವಾಯಿತು. ೧೫೬೫ರಲ್ಲಿ ಕೃಷ್ಣಾತೀರದ ರಕ್ಕಸತಂಗಡಿಯಲ್ಲಿ ಕರ್ನಾಟಕದ ಶಕ್ತಿ ಮತ್ತು ಘನತೆಗಳು ವಿಜಯನಗರವು ಸೋತ ಮೇಲೆ ಕುಂದಿಹೋದವೆಂದು ಹೇಳಬಹುದು.

ಆರ್. ಆರ್. ದಿವಾಕರರು "ಏಕತಂತ್ರ ಕರ್ನಾಟಕ" ಎಂಬ ಪುಸ್ತಕದಲ್ಲಿ "ಕರ್ನಾಟಕದಲ್ಲಿ ಮೊದಲು ಭಾಷೆ, ಧರ್ಮ, ಸಾಹಿತ್ಯ, ರಾಜಕೀಯ ಸಂಸ್ಥೆಗಳು ಸಾಂಸ್ಕೃತಿಕ ಏಕೀಕರಣ ಮತ್ತು ಸಾಮಾಜಿಕ ಪದ್ಧತಿಗಳಲ್ಲಿ ಅಭಿವೃದ್ಧಿಯ ಶಿಖರ ವನ್ನೇರಿದ್ದವು. ಶಕ್ತಿಯುತವಾದ ರಾಷ್ಟ್ರೀಯತ್ವದ ಅಸ್ತಿತ್ವಕ್ಕೆ ಇವುಗಳಿಗಿಂತ ಬೇರೆ ಪುರಾವೆಗಳೇನು ಬೇಕು" ಎಂದು ತಿಳಿಸಿ ದ್ದಾರೆ. ಹೀಗೆ ಭಾರತದ ಹಿರಿಮೆಗೆ ಕರ್ನಾಟಕದ ಕೊಡು ಗೆಯು ಮಹತ್ತರವಾದುದು. ಮತ್ತು ಬಹಳ ರೀತಿಯಲ್ಲಿ ಅಪ್ರ ತಿಮವಾದದ್ದು. ಇಡೀ ಭಾರತದಲ್ಲಿ ಕರ್ನಾಟಕವು ತನ್ನದೇ ಆದ ಅಸ್ತಿತ್ವವನ್ನು ಕಾಪಾಡಿಕೊಂಡು ಭಾರತದ ಸಂಸ್ಕೃತಿ ಯನ್ನು ಸಮೃದ್ಧಿಗೊಳಿಸಿದೆಯೆಂದು ಹೇಳಿದರೆ ಅತಿಶಯೋಕ್ತಿ ಯಾಗಲಾರದು.

**ಕರ್ನಾಟಕದಲ್ಲಿ ಸ್ವಾತಂತ್ರ್ಯಕ್ಕೋಸುಗ ನಡೆದ ಪ್ರಯತ್ನ ಗಳು:** ೧೮ನೆಯ ಶತಮಾನದ ಪ್ರಾರಂಭದಿಂದ ಕರ್ನಾಟ ಕವು ಮರಾಠರ ದಬ್ಬಾಳಿಕೆಗೆ ಒಳಪಟ್ಟಿತ್ತು. ಔರಂಗಜೇಬನು ಸತ್ತನಂತರ ಮೊಘಲ್ ಸಾಮ್ರಾಜ್ಯ ಕುಸಿಯಲಿಕ್ಕೆ ಹತ್ತಿತು. ಸಾಮ್ರಾಜ್ಯದ ಅನೇಕ ಭಾಗಗಳು ಸ್ವತಂತ್ರವಾದವು. ಮರಾ ಠರು ಮತ್ತು ನಿಜಾಮರು ತಮ್ಮ ಸ್ವಾತಂತ್ರ್ಯವನ್ನು ಸಾರಿ ದರು. ಹೈದರ ಅಲಿಯು ಮರಾಠರ ವಿಸ್ತರಣೆಯನ್ನು ವಿರೋಧಿಸಿದನು. ಮೇಲಿಂದ ಮೇಲೆ ಸಂಭವಿಸತಕ್ಕ ಯುದ್ಧ

ಕಾರ್ಯಗಳಲ್ಲಿಯೇ ತನ್ನ ಜೀವನಪರ್ಯಂತವೂ ನಿರತನಾಗಿದ್ದನು. ಹೈದರನ ಮಗನಾದ ಟೀಪುಸುಲ್ತಾನನು ನಿಜಾಂ ಮರಾಠರನ್ನು ಸೋಲಿಸುವ ಮಹತ್ವಾಕಾಂಕ್ಷೆ ಇಟ್ಟುಕೊಂಡಿದ್ದನಲ್ಲದೇ ಫ್ರೆಂಚರ ಸಹಾಯದಿಂದ ಬ್ರಿಟಿಶರನ್ನು ಹೊಡೆದೋಡಿಸಬೇಕೆಂದೂ ಹವಣಿಸುತ್ತಿದ್ದನು. ಆ ದಿಸೆಯಲ್ಲಿ ಅನೇಕ ಪ್ರಯತ್ನಗಳನ್ನು ಮಾಡಿದನು. ಆದರೆ ದುರ್ದೈವದಿಂದ ೧೭೯೯ರಲ್ಲಿ ಶ್ರೀರಂಗಪಟ್ಟಣದ ಯುದ್ಧದಲ್ಲಿ ಸೋತು ಮಡಿದನು. ಹೀಗೆ ಹೈದರ ಮತ್ತು ಟೀಪು ಕರ್ನಾಟಕವನ್ನು ಪರಕೀಯರ ದಬ್ಬಾಳಿಕೆಯಿಂದ ರಕ್ಷಿಸಲು ಪ್ರಯತ್ನ ಮಾಡಿದರು. ಹೀಗೆ ಇಬ್ಬರೂ ತಮ್ಮದೇ ಆದ ರೀತಿಯಿಂದ ಭಾರತದಲ್ಲಿದ್ದ ಬ್ರಿಟಿಶ್‌ರನ್ನು ಹಣಿಯಲು ಪ್ರಯತ್ನಿಸಿದರು. ಅವರು ಸೋತರೇನೋ ನಿಜ! ಆದರೆ ಟೀಪೂ ಸತ್ತನಂತರವೂ ಕರ್ನಾಟಕದ ಅನೇಕ ಭಾಗಗಳಲ್ಲಿ ಸ್ವಾತಂತ್ರ್ಯವನ್ನು ಪಡೆಯುವ ಪ್ರಯತ್ನಗಳೂ ಅವಿರತವಾಗಿ ಸತತವಾಗಿ ನಡೆದೇ ಇದ್ದವು. ಅದೇಕೆ? ೧೯೪೭ರ ವರೆಗೆ ಸ್ವಾತಂತ್ರ್ಯ ಸಿಗುವ ವರೆಗೂ ಪ್ರಯತ್ನಗಳು ಈ ದಿಶೆಯಲ್ಲಿ ಮುಂದುವರಿದವು. ಈ ಪ್ರಯತ್ನದಲ್ಲಿ ಸಾವಿರಾರು ಜೀವಿಗಳು ತಮ್ಮ ಪ್ರಾಣವನ್ನು ತೆತ್ತರು.

# ೬ ಸ್ವಾತಂತ್ರ್ಯ ಯುದ್ಧದಲ್ಲಿ ಕರ್ನಾಟಕದ ಪಾತ್ರ

ಉತ್ತರ ಹಿಂದುಸ್ಥಾನದಲ್ಲಿ ಬ್ರಿಟಿಶರ ಆಳಿಕೆಯ ನೊಗವನ್ನು ಕೊಡವಿಹಾಕುವ ಪ್ರಯತ್ನಗಳು ನಡೆದಿರುವಾಗ ದಕ್ಷಿಣ ಹಿಂದುಸ್ಥಾನದಲ್ಲಿ ಕರ್ನಾಟಕವು ಸಹ ತನ್ನದೇ ಆದ ಪ್ರಯತ್ನವನ್ನು ಮಾಡಿತು ೧೮೫೭ರಲ್ಲಿ ಮತ್ತು ಆ ನಂತರ ಕರ್ನಾಟಕದಲ್ಲಿ ಅತೃಪ್ತಿ ತಾಂಡವವಾಡುತ್ತಿತ್ತು. ಅನೇಕ ಕಲಹ ದಂಗೆಗಳೇಳುತ್ತಿದ್ದವು ಮತ್ತು ಚಳುವಳಿಗಳು ನಡೆದವು. ಕಲಬುರ್ಗಿ(ಸಧ್ಯದ ಗುಲಬರ್ಗಾ) ಜಿಲ್ಲೆಯಲ್ಲಿ ಆಗ ಸುರಪುರ ಒಂದ ಸಣ್ಣ ಪ್ರಾಂತ. ಈ ಪ್ರಾಂತದಲ್ಲಿ ಹಾಗೂ ಹಲಗಲಿ(ವಿಜಾಪೂರ ಜಿಲ್ಲೆಯ ಮುಧೋಳ ತಾಲೂಕಿನ) ಎಂಬ ಗ್ರಾಮದ ವರೆಗೂ ಅನೇಕ ಗ್ರಾಮಗಳಲ್ಲಿ ಬೇಡರು ಹೆಚ್ಚಾಗಿ ವಾಸಿಸುತ್ತಿದ್ದರು.

೧೯ನೆಯ ಶತಮಾನದ ಆದಿಯಲ್ಲಿ ಆ ಪ್ರಾಂತ (ಸುರಪುರ) ಬ್ರಿಟಿಶರ ಪ್ರಭಾವಕ್ಕೊಳಗಾಯಿತು ಆ ಪ್ರಾಂತದ

ರಾಜನಾದ ವೆಂಕಟಪ್ಪನಾಯಕನು ತನ್ನ ಸೈನ್ಯದಲ್ಲಿ ಅರಬ ಮತ್ತು ರೋಹಿಲ್ ಮತ್ತು ಇನ್ನಿತರರನ್ನು ನೇಮಿಸಿದನು. ಬ್ರಿಟಿಶರನ್ನು ಹೊಡೆದೋಡಿಸಬೇಕೆಂಬ ರಾಜಾವೆಂಕಟಪ್ಪನ ಮಹಾತ್ವಾಕಾಂಕ್ಷೆಗೆ ರಾಯಚೂರ ಪ್ರದೇಶದ ಜಮೀನದಾರರು ಉತ್ತೇಜನವನ್ನು ನೀಡಿದರೆಂದು ತೋರುತ್ತದೆ. ಆ ಪ್ರಾಂತದ ನೆರೆಹೊರೆಯ ರಾಜರೂ ಸಹ ಅವನಿಗೆ ಸಹಾಯ ಮಾಡಲು ಉತ್ಸುಕರಾಗಿದ್ದರು. ಮುಂಡರಗಿಯ ಭೀಮರಾಯ ಮತ್ತು ನರಗುಂದದ ಬಾಬಾಸಾಹೇಬರು ವೆಂಕಟಪ್ಪನಾಯಕನ ಜೊತೆ ಪತ್ರವ್ಯವಹಾರ ನಡೆಸಿದ್ದರು. ಒಂದು ವೇಳೆ ಬ್ರಿಟಿಶರ ವಿರುದ್ಧ ಅವನು ಬಂಡೆದ್ದರೆ ಸಹಾಯದ ಆಶ್ವಾಸನೆಯನ್ನು ಸಹ ಕೊಟ್ಟಿದ್ದರು. ಅದರಂತೆ ವೆಂಕಟಪ್ಪನಾಯಕನು ಬ್ರಿಟಿಶರ ವಿರುದ್ಧ ಬಂಡೆಬ್ಬಿಸಿದನು. ಆದರೆ ಅದು ಫಲಕಾರಿಯಾಗಲಿಲ್ಲ. ಬ್ರಿಟಿಶರು ಅವನನ್ನು ವಿಚಾರಣೆಗೊಳಪಡಿಸಿ ಮರಣದಂಡನೆಯನ್ನು ವಿಧಿಸಿದರು. ಮಿಡೋಸ್ ಟೇಲರನು "The story of my life" ಎಂಬ ಆತ್ಮಚರಿತ್ರೆಯಲ್ಲಿ ಸುರಪುರದ ಶೂರ ದೊರೆಯ ದುಃಖಾಂತ್ಯವನ್ನು ಹೃದಯವಿದ್ರಾವಕವಾಗಿ ಬರೆದಿರುವನು.

ಮಳೆಗಾಲದಲ್ಲಿ ಎಲ್ಲ ಸ್ಥಳಗಳಲ್ಲಿ ಏಕಕಾಲಕ್ಕೆ ಉತ್ತರ ಕರ್ನಾಟಕದ ರಾಜರು ಬ್ರಿಟಿಶರ ವಿರುದ್ಧ ಬಂಡೇಳಲು, ಪೂರ್ವ ಯೋಜನೆಯ ಪ್ರಕಾರ ಯೋಜಿಸಿದ್ದರು ಆದರೆ

ಬ್ರಿಟಿಶ್‌ರು ವೆಂಕಟಪ್ಪನಾಯಕನನ್ನು ಹತ್ತಿಕ್ಕಲು ಸಕಾಲಿಕ ಕ್ರಮವನ್ನು ಕೈಕೊಂಡುದರ ಪರಿಣಾಮವಾಗಿ ಮುಂಡರಗಿ ಭೀಮರಾವ ಮತ್ತು ನರಗುಂದ ಬಾಬಾಸಾಹೇಬನ ಪ್ರಯತ್ನಗಳು ವಿಫಲವಾದವು. ಇಲ್ಲದಿದ್ದರೆ ರಾಯಚೂರ, ಕಲಬುರ್ಗಿ ಮತ್ತು ಉತ್ತರ ಕರ್ನಾಟಕದ ಇತರ ಭಾಗಗಳಲ್ಲಿ ದಂಗೆಯು ಭೀಕರ ಸ್ವರೂಪವನ್ನೂ ತಾಳಬಹುದಿತ್ತು.

ನರಗುಂದದ ಬಾಬಾಸಾಹೇಬನು ಬ್ರಿಟಿಶ್‌ರ ವಿರುದ್ಧ ಹೋರಾಡುವ ಕಥೆಗೂ, ವೆಂಕಟಪ್ಪನಾಯಕನ ಯುದ್ಧದ ಕಥೆಗೂ ಸ್ವಲ್ಪ ಮಟ್ಟಿಗೆ ಅಂತರವಿದೆ. ಇದಕ್ಕೆ ಎರಡು ಕಾರಣಗಳುಂಟು. ಒಂದನೆಯದು ನಿಶಸ್ತ್ರೀಕರಣ ಕಾಯ್ದೆಯನ್ನು (Indian Arms Act) ಪಾಸುಮಾಡಿದ್ದು. ಎರಡನೆಯದು ಡಾಲಹೌಸಿಯ ದತ್ತಕ ಪದ್ಧತಿಯನ್ನು ಜಾರಿಯಲ್ಲಿ ತಂದದ್ದು. ಇವೆರಡು ಕಾರಣಗಳಿಗಾಗಿ ನರಗುಂದ ರಾಜನು ಬ್ರಿಟಿಶ್‌ರ ವಿರುದ್ಧ ದಂಗೆ ಎಬ್ಬಿಸಿ ಥಾಂಪ್ಸನನ್ನು ಕೊಂದನು. ಆದರೆ ಕರ್ನಲ್ ಮಾಲ್ಕೊಮ್ ೧೮೫೮ನೆಯ ಜೂನ ಎರಡರಂದು ಆವನ ದಂಗೆಯನ್ನು ಸೆದೆ ಬಡೆದನು. ಸುರಪುರ ರಾಜನಂತೆ ಇವನನ್ನೂ ಸಹ ೧೨—೬—೧೮೫೮ ರಂದು ವಿಚಾರಣೆಗೊಳಪಡಿಸಿ ಗಲ್ಲಿಗೇರಿಸಲಾಯಿತು.

ಅನೇಕ ರೀತಿಯಿಂದ ವಿಭಜಿಸಲ್ಪಟ್ಟ ಕರ್ನಾಟಕದಲ್ಲಿ ಪರಕೀಯರ ದಬ್ಬಾಳಿಕೆಯನ್ನು ತಡೆಗಟ್ಟುವ ಕೆಚ್ಚು ಅವರಲ್ಲಿ

ಆರಿರಲಿಲ್ಲವೆಂಬುದಕ್ಕೆ ಇವೆಲ್ಲ ಉದಾಹರಣೆಗಳು. ಬ್ರಿಟಿಶ್‌ರ ವಿರುದ್ಧ ಈ ಪ್ರಯತ್ನಗಳು ಸಫಲವಾಗಲಿಲ್ಲ. ಆದರೆ ಬ್ರಿಟಿಶ್‌ರ ಉದ್ದೇಶಗಳು ಮಾತ್ರ ಸಫಲವಾದವು ಟೀಪುವಿನ ಮರಣದ ನಂತರ ದಕ್ಷಿಣ ಭಾರತದಲ್ಲಿ ಬ್ರಿಟಿಶ್‌ರು ತಮ್ಮ ಆಡಳಿತದ ಅನುಕೂಲಕ್ಕಾಗಿ ಕರ್ನಾಟಕ ಪ್ರದೇಶಗಳನ್ನು ವಿಭಜಿಸಿದರು. ಕನ್ನಡ ಮಾತಾಡುವಂಥ ಜನರನ್ನು ಬೇರೆ ಭಾಷೆಗಳನ್ನಾಡುವ ಬಹುಸಂಖ್ಯಾತರಿರುವ ಬೇರೆ ಬೇರೆ ಇಲಾಖೆಗಳಲ್ಲಿ ಕೂಡಿಸಿದರು. ಉದಾಹರಣಾರ್ಥವಾಗಿ ಧಾರವಾಡ, ಬೆಳಗಾಂವಿ, ವಿಜಾಪುರ ಮತ್ತು ಕಾರವಾರ ಈ ನಾಲ್ಕು ಜಿಲ್ಹೆಗಳ ಜನರ ಭಾಷೆ ಕನ್ನಡವಿದ್ದು ಅವರನ್ನು ಬಹು ಸಂಖ್ಯಾಕ ಮರಾಠಿ ಭಾಷೆಯನ್ನಾಡುವ ಮುಂಬೈ ಇಲಾಖೆಯಲ್ಲಿ ಕೂಡಿಸಿದರು. ದಕ್ಷಿಣಕನ್ನಡ ಜಿಲ್ಹೆಯನ್ನು ಮದ್ರಾಸ ಇಲಾಖೆಯಲ್ಲಿ ಸೇರಿಸಿದರು. ಇಲ್ಲಿಯ ಜನರ ಭಾಷೆ ತಮಿಳು. ಕನ್ನಡ ಪ್ರದೇಶಗಳಾದ ಕಲಬುರ್ಗಿ, ರಾಯಚೂರ ಮತ್ತು ಬೀದರ ಜಿಲ್ಹೆಗಳನ್ನು ನಿಜಾಂ ಪ್ರಾಂತದಲ್ಲಿ ಕೂಡಿಸಿದರು. ಕೊಡಗಿಗೆ ಸ್ವತಂತ್ರವಾದ ಅಸ್ತಿತ್ವವನ್ನು ಕೊಟ್ಟರು. ಮೈಸೂರ ಒಡೆಯರ ವಂಶದ ಆಳಿಕೆಯಲ್ಲಿ ಬಂದಿತು. ಹೀಗೆ ಬ್ರಿಟಿಶ್‌ರು ರಾಜ್ಯಗಳನ್ನು ವಿವಿಧ ಭಾಗಗಳನ್ನಾಗಿ ಒಡೆದು ಆಳುವ ನೀತಿಯ ಫಲವಾಗಿ ಕನ್ನಡ ಮಾತಾಡುವ ಸೀಮೆ ೫ ಆಡಳಿತ ಪ್ರದೇಶಗಳಲ್ಲಿ ಹಂಚಿಹೋಯಿತು. ಮುಂಬೈ, ಮದ್ರಾಸ, ಹೈದರಾಬಾದ, ಮೈಸೂರು ಮತ್ತು ಕೊಡಗಿನಲ್ಲಿ ಹೆಚ್ಚಾಗಿ

ಕನ್ನಡ ಮಾತನಾಡುವ ಜನರಿದ್ದರು. ಇವಲ್ಲದೆ ೧೪ ಸಂಸ್ಥಾನಗಳು ಇದ್ದವು. ಅಲ್ಲಿಯ ಜನರು ಕನ್ನಡ ಮಾತಾಡುತ್ತಿದ್ದರೂ ರಾಜರು ಅವರ ಮೇಲೆ ಮರಾಠಿಯನ್ನು ಹೇರಿದ್ದರು ಕರ್ನಾಟಕದಲ್ಲಿ ಬ್ರಿಟಿಶ್ ಆಡಳಿತದ ಎಲ್ಲ ಪ್ರದೇಶಗಳಲ್ಲಿಯೂ ಕನ್ನಡಿಗರದು ಅಲ್ಪ ಸಂಖ್ಯೆ. ಆದ್ದರಿಂದ ಅವರಿಗೆ ತಮ್ಮ ಹಿತ ಸಾಧನೆಯನ್ನು ಸಾಧಿಸಲು ಸಾರ್ವಜನಿಕ ಮತ್ತು ರಾಷ್ಟ್ರೀಯ ಅಭಿಪ್ರಾಯವನ್ನು ರೂಪಿಸಲು ಸಾಧ್ಯವಾಗಲಿಲ್ಲ.

ಹೀಗೆ ಕರ್ನಾಟಕದಷ್ಟು ಅಸ್ವಾಭಾವಿಕವಾಗಿ ಭಾರತದಲ್ಲಿ ಯಾವ ಪ್ರದೇಶವನ್ನೂ ವಿಭಜಿಸಿರಲಿಲ್ಲ. ನೃಪತುಂಗನ ಕಾಲಕ್ಕೆ ಕರ್ನಾಟಕದ ಪ್ರದೇಶಗಳು ಕಾವೇರಿಯಿಂದ ಗೋದಾವರಿಯ ವರೆಗೆ ಹಬ್ಬಿದ್ದವು. ಆದರೆ ಈಗ ಕಾವೇರಿಯಿಂದ ಭೀಮಾ ನದಿಯ ವರೆಗೆ ಮಾತ್ರ ಆಕುಂಚನ ಹೊಂದಿವೆ. ಮತ್ತು ೧೯ ಭಾಗಗಳಲ್ಲಿ ಹರಿದು ಹಂಚಿಹೋಗಿದೆ. ತತ್ಪರಿಣಾಮವಾಗಿ ಮೈಸೂರನ್ನುಳಿದು ಕರ್ನಾಟಕದ ಯಾವ ಭಾಗವೂ ಅಭಿವೃದ್ಧಿ ಹೊಂದಲಿಲ್ಲ. ಬೇರೆ ಬೇರೆ ಭಾಷೆಯನ್ನಾಡುವ ಪ್ರಾಂತಗಳಿಗೆ ಕನ್ನಡದ ಪ್ರದೇಶಗಳನ್ನು ಜೋಡಿಸಿದ್ದೇ ಇದಕ್ಕೆ ಮುಖ್ಯ ಕಾರಣವೆನ್ನಬಹುದು.

# ೭ ಕನ್ನಡದ ಅರಿವು

೧೮೫೭ರ ಬಂಡಾಯದ ನಂತರ ಕೆಲವು ವರ್ಷಗಳಲ್ಲಿ ಬ್ರಿಟಿಶ್‌ರು ಮುಂದುವರಿಸಿದ ಅತ್ಯಾಚಾರಗಳು ಇತರ ಭಾರತೀಯರಂತೆ ಕನ್ನಡಿಗರಿಗೂ ಸಹ ಅರಿವಾಗತೊಡಗಿತು. ಮುಂಬೈ ರಾಜ್ಯಕ್ಕೆ ಸೇರಿದ್ದ ನಾಲ್ಕು ಜಿಲ್ಲೆಗಳಿಗೆ (ಧಾರವಾಡ, ವಿಜಾಪುರ, ಬೆಳಗಾವಿ, ಕಾರವಾರ) "ದಕ್ಷಿಣ ಮರಾಠಾ ದೇಶ"ವೆಂಬ ತಪ್ಪು ಅರ್ಥವನ್ನು ಕೊಟ್ಟಿತ್ತು. ಬ್ರಿಟಿಶ್ ಆಡಳಿತಗಾರರ ಅಜ್ಞಾನವೇ ಇದಕ್ಕೆ ಮೂಲಕಾರಣವೆನ್ನಬಹುದು. ಈ ಭಾಗಗಳಲ್ಲಿ ಮರಾಠಿಯ ಪ್ರಾಬಲ್ಯವು ಕನ್ನಡದ ಅಸ್ತಿತ್ವವನ್ನು ಸಂಕೋಚಗೊಳಿಸಿತು ಕೋರ್ಟ ಭಾಷೆಯು ಮರಾಠಿಯಾಗಿತ್ತು. ಭಕ್ತಿ ಕೀರ್ತನಗಳೂ ಸಹ ಮರಾಠಿಯಲ್ಲಿಯೇ ನಡೆಯುತ್ತಿದ್ದವು.

ಅಂದಿನ ಶಿಕ್ಷಣ ವಿಭಾಗದ ನಿರ್ದೇಶಕರಾದ ಸರ್ ವಿಲಿಯಂ ರಸೆಲ್ ತಮ್ಮ ವರದಿಯಲ್ಲಿ ಹೀಗೆ ಬರೆದಿದ್ದಾರೆ: "ಈ ವಿಭಾಗದಲ್ಲಿದ್ದ ಡೆಪ್ಯೂಟಿ ಇನ್ಸ್‌ಪೆಕ್ಟರುಗಳು ಮತ್ತು ಇಂಗ್ಲೀಷ ಶಾಲೆಯ ಮಾಸ್ತರರು ಯಾರೂ ಕನ್ನಡಿಗರಿರಲಿಲ್ಲ. ಕನ್ನಡ ಶಾಲೆಯ ಮಾಸ್ತರರಲ್ಲಿಯೂ ಸಹ ಕನ್ನಡ ಮಾಸ್ತರರು ಬಹಳ ಕಡಿಮೆ ಸಂಖ್ಯೆಯಲ್ಲಿದ್ದರು."

ರಸೆಲ್ ಮತ್ತು ಡೆಪ್ಯೂಟಿ ಚನ್ನಬಸಪ್ಪನವರು ಈ ಪ್ರದೇಶಗಳಲ್ಲಿ ತುಂಬಿತುಳುಕುತ್ತಿದ್ದ ಮರಾಠಿ ಶಾಲೆಗಳ ಸ್ಥಳದಲ್ಲಿ ಕನ್ನಡ ಶಾಲೆಗಳನ್ನು ಪ್ರಾರಂಭಿಸಿದರು. ಪಠ್ಯಪುಸ್ತಕಗಳನ್ನು ಶ್ರಮವಹಿಸಿ ರಚಿಸಲು ಲೇಖಕರಿಗೆ ಪ್ರೋತ್ಸಾಹ ಕೊಟ್ಟರು. ವ್ಯಾಪಾರಸ್ಥರು ಕನ್ನಡದಲ್ಲಿಯೇ ಲೆಕ್ಕಪತ್ರಗಳನ್ನಿಡಬೇಕೆಂದು ಪ್ರೇರೇಪಿಸಿದರು. ವೀರಶೈವ ಮಠಗಳೂ ಸಹ ಈ ದಿಶೆಯಲ್ಲಿ ಕಾರ್ಯ ಮುಂದುವರಿಸಿದ್ದು ವೈಶಾಲ್ಯಪೂರ್ಣವೆನಿಸಿದೆ. ಕನ್ನಡದ ಅಭ್ಯಾಸವು ವೀರಶೈವ ಮಠ ಮಂದಿರಗಳಲ್ಲಿ ಅವ್ಯಾಹತವಾಗಿ ನಡೆದೇ ಇತ್ತು. ವೆಂಕಟರಂಗೋ ಕಟ್ಟಿಯವರು ಒಂದು ವರದಿಯಲ್ಲಿ ಹೀಗೆಯೇ ಒರೆದಿದ್ದಾರೆ. ಕೆಲವು ಲಿಂಗಾಯತ ಮಠಗಳಲ್ಲಿ ಕನ್ನಡದ ಅಭ್ಯಾಸವು ಮಾಡಿಸಲ್ಪಡುತ್ತಿತ್ತು. ಹಿಂದೂ ಸಮಾಜದಲ್ಲಿರತಕ್ಕ ಲೋಪ ದೋಷಗಳನ್ನು ನಿವಾರಿಸುವಲ್ಲಿ ಮತ್ತು ಪ್ರಾದೇಶಿಕ ಶಿಕ್ಷಣವನ್ನು ಪುನರುಜ್ಜೀವನಗೊಳಿಸುವಲ್ಲಿ ಮಠ ಮಂದಿರಗಳು ಅವಿರತವಾಗಿ ಪ್ರಯತ್ನ ಮಾಡಿವೆ

ಕ್ರೈಸ್ತ ಮಿಶನರಿಗಳು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಕ್ರೈಸ್ತ ಧರ್ಮವನ್ನು ಪ್ರಚಾರ ಮಾಡಬೇಕೆಂಬ ಉದ್ದೇಶವನ್ನಿಟ್ಟುಕೊಂಡಿದ್ದರೂ ಅವರು ಕೈಕೊಂಡ ಶಿಕ್ಷಣ ಪ್ರಸಾರ ವೈದ್ಯಕೀಯ ಸಹಾಯ, ಕೈಗಾರಿಕಾ ಪ್ರಗತಿ, ಅಚ್ಚುಕೂಟಗಳ ಪ್ರಾರಂಭವು ಕನ್ನಡ ಸಹಿತ ಭಾರತದ ವಿವಿಧ ಭಾಷೆಗಳಲ್ಲಿ ಸಾಹಿತ್ಯ ಪುನರುಜ್ಜೀವನಕ್ಕಾಗಿ ಗಣನೀಯವಾದ

ಸೇವೆಯನ್ನು ಮಾಡಿವೆ. ಕನ್ನಡ ಭಾಷೆಯಲ್ಲಿಯ ವಿವಿಧ ರೀತಿಯ ಒತ್ತಕ್ಷರಗಳಿಂದ ಮುದ್ರಣ ಕಾರ್ಯಕ್ಕೆ ತೊಂದರೆಯಾಯಿತು. ಆದರೂ ಅವರು ಹೆದರದೆ ಕಲ್ಲಚ್ಚು ಮೊದಲಾದವುಗಳಿಂದಲೇ ಕೆಲಸವನ್ನು ಮುಂದುವರಿಸಿದರು. ಕನ್ನಡದ ಉತ್ತಮ ದರ್ಜೆಯ ಕೃತಿಗಳಾದ ದಶಪರ್ವ ಭಾರತ (೧೮೫೬) ಗಳನ್ನು ಅಚ್ಚು ಹಾಕಿದರು. ಬಾಸೆಲ್ ಮಿಶನ್, ಅಚ್ಚು ಕೂಟವು ಸಾಕಷ್ಟು ಅಭಿವೃದ್ಧಿ ಹೊಂದಿದ ಮೇಲೆ ಈ ಪಾದ್ರಿ ಪಂಡಿತರು ಬಳ್ಳಾರಿಯಲ್ಲಿ ಮುದ್ರಿಸುತ್ತಿದ್ದ 'ಕನ್ನಡ ಸಮಾಚಾರ'ವೆಂಬ ಪತ್ರಿಕೆಯನ್ನು ಮಂಗಳೂರಿಗೆ ತಂದು ಮುದ್ರಿಸಲಾರಂಭಿಸಿದರು. ಈ ಪಾದ್ರಿ ಪಂಡಿತರಲ್ಲಿ ಕೆಲವರು ಯುರೋಪಿನ ಪ್ರಮುಖ ವಿಶ್ವವಿದ್ಯಾಲಯಗಳಲ್ಲಿ ಶಿಕ್ಷಣ ಹೊಂದಿದ್ದುದರಿಂದ ಶ್ರೇಷ್ಠ ವಿದ್ವಾಂಸರಾಗಿದ್ದರು. ಇಲ್ಲಿಯ ಜನಜೀವನದ ಸ್ಥಿತಿಗತಿಗಳಿಗೆ ಹೊಂದಿಕೊಂಡು ಕ್ರಮವಾಗಿ ಜನರೊಡನೆಯೂ ಹೊಂದಿಕೊಂಡರು. ಗಂಗಾಧರ ಮಡಿವಾಳೇಶ್ವರ ತುರಮುರಿ, ವೆಂಕಟರಂಗೋ ಕಟ್ಟಿ, ಧೊಂಡೋ ನರಸಿಂಹ ಮುಳಬಾಗಿಲ ಮೊದಲಾದವರು ಕನ್ನಡದಲ್ಲಿ ಪಠ್ಯ ಪುಸ್ತಕಗಳನ್ನು ಬರೆಯಲು ಪ್ರಾರಂಭಿಸಿದರು.

## ೮ ಭಾಷೆಯ ಚಳುವಳಿ

೨೦ನೆಯ ಶತಮಾನದ ಪ್ರಾರಂಭದಲ್ಲಿ ಭಾರತದ ವಿವಿಧ ಭಾಗಗಳಲ್ಲಿ ಆಯಾ ಪ್ರಾದೇಶಿಕ ಭಾಷೆಗಳ ಅರಿವು ಜಾಗೃತವಾಗಲಿಕ್ಕೆ ಹತ್ತಿತು. ಒಂದು ಭಾಷೆಯನ್ನಾಡುವ ಜನರು ಒಂದೇ ರಾಜ್ಯದಲ್ಲಿದ್ದರೆ ಒಳ್ಳೆಯದು. ಇದರಿಂದ ಆಡಳಿತದ ಅನುಕೂಲತೆಗಳು ಅಧಿಕವಾಗುತ್ತವೆ ಎಂಬ ಅನುಭವ ಉಂಟಾಯಿತು. ೧೯೦೩ರಲ್ಲಿ ಓಡಿಸಾ ರಾಜ್ಯದಲ್ಲಿ ಸಭೆಯನ್ನು ಕರೆದು ಉತ್ಕಲ್ ಏಕೀಕರಣ ಚಳುವಳಿ ಪ್ರಾರಂಭಿಸಿದರು. ೧೯೦೫ರಲ್ಲಿ ವಂಗ ಭಂಗ ಚಳುವಳಿ ವಿರಾಟ್ ಸ್ವರೂಪ ತಾಳಿ ಆಗಿನ ಗವ್ಹರ್ನರ ಜನರಲ್‌ರಾದ ಲಾರ್ಡ ಕರ್ಜನ್‌ರು ಬಂಗಾಲವನ್ನು ಒಂದು ಗೂಡಿಸಿದರು. ೧೯೧೨ರಲ್ಲಿ ಬಿಹಾರಿಗಳಿಗೆ ಪ್ರತ್ಯೇಕ ಪ್ರಾಂತ ರಚನೆಯಾಯಿತು. ಈ ಘಟನೆಗಳು ಭಾಷಾ ಚಳುವಳಿಗೆ ಹೆಚ್ಚಿನ ಚಾಲನೆಯನ್ನು ಕೊಟ್ಟವು. ೧೯೧೩ ರಲ್ಲಿ ಓಡಿಸಾ ಮತ್ತು ಬಿಹಾರಗಳಂತೆ ಆಂಧ್ರರೂ ಚಳುವಳಿಯನ್ನು ಪ್ರಾರಂಭಿಸಿದರು. ಮೊಂಟೆಗ್ಯೂ ಚೇಮ್ಸಫೋರ್ಡ ವರದಿಯು ಭಾಷಾ ತಳಹದಿಯ ಮೇಲೆ ಪ್ರಾಂತ ರಚನೆಯ ತತ್ವವನ್ನು ಒಪ್ಪಿಕೊಂಡಿತು. ಇದು ಭಾರತದ ತುಂಬೆಲ್ಲ ಸುಶಿಕ್ಷಿತ ಜನರ ಮನವನ್ನು ಸೆರೆಹಿಡಿಯಿತು. ತುಂಡುತುಂಡಾದ ಕರ್ನಾಟಕದಲ್ಲಿಯಂತೂ ಹೇಳತೀರದಷ್ಟು ಪರಿಣಾಮವನ್ನು ಬೀರಿತು.

# ೯ ಉತ್ತರ ಕರ್ನಾಟಕದಲ್ಲಿ ಪ್ರಪ್ರಥಮವಾಗಿ ಕರ್ನಾಟಕ ಏಕೀಕರಣದ ಮೊಳಕೆ

ಕರ್ನಾಟಕದ ಎಲ್ಲ ಭಾಗಗಳನ್ನು ಒಂದುಗೂಡಿಸಬೇಕೆಂಬ ವಿಚಾರ ಮೊದಲು ಉತ್ತರ ಕರ್ನಾಟಕದಲ್ಲಿ ಮೊಳಕೆಯೊಡೆಯಿತು. ಇದು ೧೮೯೦ ರಲ್ಲಿ ಧಾರವಾಡದಲ್ಲಿ ಕರ್ನಾಟಕ ವಿದ್ಯಾವರ್ಧಕ ಸಂಘದ ಸ್ಥಾಪನೆಯ ಮೂಲಕ ವ್ಯಕ್ತವಾಯಿತು. ೧೯೦೩ ರಲ್ಲಿ ಬೆನಗಲ್ ರಾಮರಾಯರು ಕರ್ನಾಟಕ ಏಕೀಕರಣ ಕುರಿತು ಧಾರವಾಡದಲ್ಲಿ ಉಜ್ವಲವಾದ ಭಾಷಣ ಮಾಡಿದರು ೧೯೦೭ ರಲ್ಲಿ 'ವಾಗ್ಭೂಷಣ' ದಲ್ಲಿ ಆಲೂರ ವೆಂಕಟರಾಯರು ಕರ್ನಾಟಕ ಏಕಿಕರಣದ ಬಗ್ಗೆ ಒಂದು ಉದ್ದಾಮಲೇಖನವನ್ನು ಒರೆದರು. ಗಡಿಗಯ್ಯ ಹೊನ್ನಾಪುರ ಮಠರ ಪ್ರಯತ್ನದ ಫಲದಿಂದ ೧೯೧೬ ರಲ್ಲಿ ಕಡಪಾ ರಾಘವೇಂದ್ರರಾಯರು ಆಲೂರ ವೆಂಕಟರಾಯರು ಹೊನ್ನಾಪುರ ಮಠರವರ ಮನೆಯ ಅಟ್ಟದ ಮೇಲೆ "ಕರ್ನಾಟಕದ ಸಭೆ" ಪ್ರಾರಂಭಿಸಿದರು. ಕಡಪಾ ರಾಘವೇಂದ್ರರಾಯರು ಕನ್ನಡ ನಾಡನ್ನೆಲ್ಲ ಸಂಚರಿಸಿ ಏಕೀಕರಣ ಚಳುವಳಿಯನ್ನು ಚುರುಕುಗೊಳಿಸಿದರು.

೧೯೧೮ ರಲ್ಲಿ ಭಾರತಕ್ಕೆ ಬಂದಿದ್ದ ಮಾಂಟೆಗ್ಯೂ ಚೇಮ್ಸ್‌ಫೋರ್ಡ್ ಆಯೋಗದ ಮುಂದೆ ಕಡಪಾ ರಾಘವೇಂದ್ರ ರಾಯರು ಕರ್ನಾಟಕದ ಏಕೀಕರಣದ ಮನವಿಯನ್ನು ಸಲ್ಲಿಸಿದರು. ೧೯೨೦ ರಲ್ಲಿ ದಿವಾನ್ ಬಹಾದೂರ ವ್ಹಿ. ಪಿ. ಮಾಧವರಾಯರ ಅಧ್ಯಕ್ಷತೆಯೊಳಗೆ ಧಾರವಾಡದಲ್ಲಿ ಕರ್ನಾಟಕ ರಾಜಕೀಯ ಪರಿಷತ್ತು ವೈಭವದಿಂದ ನಡೆಯಿತು. ಈ ಸಮ್ಮೇಲನವು ಕನ್ನಡಿಗರನ್ನು ಬಹಳವಾಗಿ ಕೆರಳಿಸಿತು. ಕರ್ನಾಟಕದ ವಿವಿಧ ಭಾಗಗಳಲ್ಲಿ ನೆಲಸಿರತಕ್ಕ ಕನ್ನಡಿಗರ ಸಂಗಡ ಅವಿಚ್ಛಿನ್ನವಾದ ಸಂಪರ್ಕಗಳುಂಟಾಗಲು ಪ್ರಾರಂಭವಾಯಿತು. ಈ ಎಲ್ಲ ಚಳುವಳಿಗಳ ಫಲವಾಗಿ ೧೯೨೦ ರಲ್ಲಿ ಅಖಿಲ ಭಾರತ ಕಾಂಗ್ರೆಸ್ ಕರ್ನಾಟಕ ಒಂದು ಶಾಖೆಯನ್ನು ತೆರೆಯಿತು.

ಈ ಚಳುವಳಿಗೆ ಅನೇಕ ಕಡೆಗಳಿಂದ ಸಹಾಯ ಸಹಕಾರದ ಹಸ್ತಗಳು ಮುಂದೆ ಬಂದವು ಕೊಲ್ಲಾಪುರ ಮತ್ತು ಸೊಲ್ಲಾಪುರದ ಕನ್ನಡ ಸಂಘಗಳು, ಮುಂಬಯಿಯ ಅಖಿಲ ಕರ್ನಾಟಕ ಸೇವಾಸಮಿತಿ, ಮೊಗವೀರ ವ್ಯವಸ್ಥಾಪಕ ಮಂಡಳಿ ಹುಬ್ಬಳ್ಳಿ ಏಕೀಕರಣ ಸಮಿತಿ, ಹೈದರಾಬಾದ ಕರ್ನಾಟಕದ ಕಲಬುರ್ಗಿ, ರಾಯಚೂರ ಮತ್ತು ಬೀದರ ಪ್ರದೇಶ ಕಾಂಗ್ರೆಸ್ ಸಮಿತಿಗಳು ಇಂಥ ಅನೇಕ ಸಂಘ ಸಂಸ್ಥೆಗಳು ಒಂದಿಲ್ಲೊಂದು ರೀತಿಯಿಂದ ಕರ್ನಾಟಕ ಏಕೀಕರಣ ಚಳುವಳಿಯನ್ನು ತೀಕ್ಷ್ಣಗೊಳಿಸಿತು.

# ೧೦ ಕರ್ನಾಟಕ ಏಕೀಕರಣದ ಸಮ್ಮೇಲನಗಳು

ಕರ್ನಾಟಕ ಏಕೀಕರಣವನ್ನೇ ಉದ್ದೇಶವುಳ್ಳ ಕೆಲವು ಸಮ್ಮೇಲನಗಳು ಕರ್ನಾಟಕದ ಬೇರೆ ಬೇರೆ ಭಾಗಗಳಲ್ಲಿ ನಡೆದವು. ೧೯೧೫ ರಲ್ಲಿ ಮೈಸೂರಿನ ಪ್ರಾಂತವು ಏಕೀಕರಣ ಚಳುವಳಿಯ ಇತಿಹಾಸದಲ್ಲಿಯೇ ಅತ್ಯಂತ ಮಹತ್ವದ್ದಾಗಿದೆ. ೧೯೧೫ ರಲ್ಲಿ ಸರ್ ಎಂ. ವಿಶ್ವೇಶ್ವರಯ್ಯನವರ ಪ್ರೋತ್ಸಾಹದಿಂದ ಕನ್ನಡ ಸಾಹಿತ್ಯ ಪರಿಷತ್ತಿನ ಸ್ಥಾಪನೆಯಾಯಿತು. ಕನ್ನಡಭಾಷಾ ಅಭಿವೃದ್ಧಿ ಮತ್ತು ಕರ್ನಾಟಕ ಏಕೀಕರಣಕ್ಕೆ ಪ್ರೋತ್ಸಾಹ ಕೊಡುವದೇ ಈ ಸಂಸ್ಥೆಯ ಉದ್ದೇಶವಾಗಿತ್ತು. ಕನ್ನಡ ಸಾಹಿತ್ಯ ಪರಿಷತ್ತು ಅಂದಿನಿಂದ ಇಂದಿನ ವರೆಗೂ ಕರ್ನಾಟಕ ಏಕೀಕರಣದ ದುಂದುಭಿಯನ್ನು ಮೊಳಗಿಸಿದೆ.

ಕಲಬುರ್ಗಿ, ಬೀದರ ಮತ್ತು ರಾಯಚೂರ ಜಿಲ್ಲೆಗಳಲ್ಲಿ ಈ ತರಹದ ಚಟುವಟಿಕೆಗಳು ೧೯ನೆಯ ಶತಮಾನದ ಕೊನೆಯ ಭಾಗದಲ್ಲಿ ಪ್ರಾರಂಭವಾದವು. ೨೦ನೆಯ ಶತಮಾನದ ಆದಿಯಲ್ಲಿ ಕನ್ನಡ ಭಾಷೆ ಮತ್ತು ಸಂಸ್ಕೃತಿಯನ್ನು ಕಾಪಾಡುವ ಇಚ್ಛೆ ಪ್ರಬಲವಾಗಿ ಪ್ರಕಟವಾಯಿತು. ಆದರೆ ಕೊಡಗು

ಕರ್ನಾಟಕ ಏಕೀಕರಣವಾಗುವದಕ್ಕೆ ಮುಂಚೆ ಚೀಫ ಕಮಿಶನರರ ಪ್ರಾಂತವಾಗಿತ್ತು. ಅಲ್ಲಿ ಆಗ ಕಾಂಗ್ರೆಸ್ ಸಂಸ್ಥೆ ಮಾತ್ರ ತನ್ನ ಚಟುವಟಿಕೆಗಳನ್ನು ಪ್ರಾರಂಭಿಸಿತ್ತು. ಸಕ್ರಿಯ ಕಾಂಗ್ರೆಸಿಗರಾದ ಪಿ. ಕಾಶಪ್ಪನವರು ಮತ್ತು ಪಿ. ಆಯ್. ಬೆಳ್ಳಿಯಪ್ಪನವರು ರಾಷ್ಟ್ರೀಯತೆಯ ಚಳುವಳಿಯಲ್ಲಿ ಮುಂದಾಳತ್ವವನ್ನು ವಹಿಸಿದ್ದರು.

೧೯೨೪ ರಲ್ಲಿ ಬೆಳಗಾವಿಯಲ್ಲಿ ಸರ್ ಸಿದ್ದಪ್ಪ ಕಂಬಳಿಯವರ ಅಧ್ಯಕ್ಷತೆಯಲ್ಲಿ, ೧೯೨೬ ರಲ್ಲಿ ಬಳ್ಳಾರಿಯಲ್ಲಿ ಪಿ. ಆರ್. ಚಿಕ್ಕೋಡಿಯವರ ಅಧ್ಯಕ್ಷತೆಯಲ್ಲಿ, ೧೯೨೭ ರಲ್ಲಿ ಧಾರವಾಡದಲ್ಲಿ ಡಾ|| ಫ. ಗು. ಹಳಕಟ್ಟಿಯವರ ಅಧ್ಯಕ್ಷತೆಯಲ್ಲಿ, ೧೯೩೧ ರಲ್ಲಿ ಕಾರವಾರದಲ್ಲಿ ಜೆ. ವ್ಹಿ. ಸಾಲ್ಡಾನಾರವರ ಅಧ್ಯಕ್ಷತೆಯಲ್ಲಿ, ೧೯೩೩ ರಲ್ಲಿ ಧಾರವಾಡದಲ್ಲಿ ಡಿ. ವ್ಹಿ. ಬೆಳವಿಯವರ ಅಧ್ಯಕ್ಷತೆಯಲ್ಲಿ, ೧೯೪೦ ರಲ್ಲಿ ಸೊಲ್ಲಾಪುರದಲ್ಲಿ ಡಾ. ಆರ್. ನಾಗನಗೌಡರ ಅಧ್ಯಕ್ಷತೆಯಲ್ಲಿ, ೧೯೪೬ ರಲ್ಲಿ ಮುಂಬೈಯಲ್ಲಿ ಬಿ. ಜಿ. ಖೇರರ ಅಧ್ಯಕ್ಷತೆಯಲ್ಲಿ ಏಕೀಕರಣದ ಸಮ್ಮೇಲನಗಳಾದವು. ೧೯೪೭ ರಲ್ಲಿ ದಾವಣಗೇರಿಯಲ್ಲಿ ಎಂ. ಪಿ. ಪಾಟೀಲರ ಅಧ್ಯಕ್ಷತೆಯಲ್ಲಿ, ೧೯೫೧ ರಲ್ಲಿ ಬೆಂಗಳೂರಿನಲ್ಲಿ ಟಿ. ಸುಬ್ರಹ್ಮಣ್ಯರವರ ಅಧ್ಯಕ್ಷತೆಯಲ್ಲಿ ನಡೆದ ಕರ್ನಾಟಕ ಪ್ರಾಂತ ರಚನಾ ಸಮ್ಮೇಲನಗಳು ಸ್ಮರಣಾರ್ಹವಾಗಿವೆ.

ಕರ್ನಾಟಕ ಏಕೀಕರಣ ಚಳುವಳಿಯು ಮೊದಲು ಬ್ರಿಟಿಶ್ ಕರ್ನಾಟಕವನ್ನು ಒಂದುಗೂಡಿಸಿ ಅನಂತರ ಜಮಖಂಡಿ, ಮುಧೋಳ, ಸೊಂಡೂರು, ಸವಣೂರು, ರಾಮದುರ್ಗ ಮೊದಲಾದ ಸಂಸ್ಥಾನಗಳನ್ನು ಕರ್ನಾಟಕದಲ್ಲಿ ಜೀರ್ಣವಾಗುವಂತೆ ಮಾಡಿ ಆ ಮೇಲೆ ಮೈಸೂರು, ಹೈದ್ರಾಬಾದ ಮತ್ತು ಕೊಡಗುಗಳನ್ನು ಕರ್ನಾಟಕದಲ್ಲಿ ಒಟ್ಟುಗೂಡಿಸಿ ವಿಶಾಲ ಕರ್ನಾಟಕವನ್ನು ರಚಿಸಬೇಕೆಂಬ ಉದ್ದೇಶವನ್ನಿಟ್ಟುಕೊಂಡು ಕ್ರಮೇಣವಾಗಿ ಸಾಧನೆ ಮಾಡಿತೆಂದು ಹೇಳಬಹುದು. ೧೯೪೭ ರಲ್ಲಿ ಭಾರತಕ್ಕೆ ಸ್ವಾತಂತ್ರ್ಯ ದೊರೆತ ಅನಂತರ ಅದುವರೆಗೆ ನಡೆದ ಚಳುವಳಿಯ ಫಲವಾಗಿ ಪ್ರಧಾನಿ ಪಂ. ನೆಹರು "ಸ್ವತಂತ್ರ ಭಾರತದಲ್ಲಿ ಭಾಷಾವಾರು ಪ್ರಾಂತಗಳು ಅಗತ್ಯ ಮತ್ತು ಅನಿವಾರ್ಯ" ಎಂದು ಲೋಕಸಭೆಯಲ್ಲಿ ಒಪ್ಪಿಕೊಂಡರು.

ಈ ಮಧ್ಯೆ ಬೆಳಗಾವಿಯನ್ನು ನುಂಗಲು ಮರಾಠಿಗರೂ ಬಳ್ಳಾರಿಯನ್ನು ನುಂಗಲು ತೆಲುಗರೂ ಪ್ರಯತ್ನಿಸಿದರು. ಇದಕ್ಕಾಗಿ ಸರಕಾರದಿಂದ ಧಾರ್ ಸಮಿತಿ ೧೯೪೮ ರಲ್ಲಿ ನೇಮಕವಾಯಿತು. ೧೯೪೯ರಲ್ಲಿ ತ್ರಿಮೂರ್ತಿ ಸಮಿತಿ, ೧೯೫೩ ರಲ್ಲಿ ಮಿಶ್ರಾ ಆಯೋಗ ಮೊದಲಾದ ಕಡೆಗೆ ಕನ್ನಡಿಗರು ಹೋಗಿ ಅಂಕಿಸಂಖ್ಯೆಗಳ ಆಧಾರದಿಂದ ಬೆಳಗಾವಿ, ಬಳ್ಳಾರಿಗಳು ಕರ್ನಾಟಕಕ್ಕೆ ಸೇರಿದುವು ಎಂದು ಪ್ರತಿಪಾದಿಸಿದರು.

ಹೀಗೆ ಬಹುಕಾಲ ನಡೆದ ಏಕೀಕರಣ ಚಳುವಳಿಯ ಪರಿಣಾಮವಾಗಿ ೧೯೫೫ರಲ್ಲಿ ಕೇಂದ್ರ ಸರಕಾರದವರು ನೇಮಿಸಿದ ರಾಜ್ಯಗಳ ಪುನರ್ವಿಂಗಡನಾ ಆಯೋಗದ (SRC or Fazal Ali Commission) ತೀರ್ಮಾನದ ಫಲವಾಗಿ ೧೯೫೬ನೆಯ ನವ್ಹಂಬರ ೧ ರಂದು ದಕ್ಷಿಣ ಭಾರತದಲ್ಲಿ ವಿಶಾಲ ಮೈಸೂರು ರಾಜ್ಯ, ಕೇರಳ, ತಮಿಳುನಾಡು, ಆಂಧ್ರಪ್ರದೇಶ ಮತ್ತು ಮಹಾರಾಷ್ಟ್ರ ಎಂಬ ಐದು ರಾಜ್ಯಗಳು ಉದಯವಾದವು. ಅವರು ಸಮಗ್ರ ಕರ್ನಾಟಕವನ್ನೆಲ್ಲ ಸಂಚರಿಸಿ ಹಲವರ ಸಾಕ್ಷಿಗಳನ್ನು ಕೇಳಿ ಬಹಳ ನ್ಯಾಯಸಮ್ಮತವಾದ ತೀರ್ಪನ್ನು ಕೊಟ್ಟರು. ಅದರ ಫಲವಾಗಿ ರಚನೆಯಾದುದೇ ಈಗಿನ ಕರ್ನಾಟಕದ ರಾಜ್ಯ (ಅಂದಿನ ಮೈಸೂರು ರಾಜ್ಯ). ಹೀಗೆ ಸ್ವತಂತ್ರ ಭಾರತದಲ್ಲಿ ಕರ್ನಾಟಕವು ತಲೆ ಎತ್ತಿ ನಿಲ್ಲಬೇಕಾದರೆ ಕನ್ನಡಿಗರಿಗೆಲ್ಲ ಕರ್ನಾಟಕತ್ವದ ಕಲ್ಪನೆ ಚೆನ್ನಾಗಿ ಬೇರೂರುವದು ಅವಶ್ಯವಾಗಿದೆ. ಕನ್ನಡ ಮಾತಾಡುವವರೆಲ್ಲರೂ ಒಬ್ಬ ತಾಯಿಯ ಮಕ್ಕಳು, ಒಂದು ಕುಲದವರು—"ನಮ್ಮ ತಾಯಿ ಕನ್ನಡ, ನಮ್ಮ ರಕ್ತ ಕನ್ನಡ, ನಮ್ಮ ನುಡಿಯು ಕನ್ನಡ" ಎಂದು ಹಿಂದಿನ ಕವಿಗಳು ಹೇಳಿದ್ದಾರೆ. ಇದರ ರಹಸ್ಯವನ್ನು ನಮ್ಮ ಜನರು ಅರಿಯಬೇಕು. ಈ ಬಗೆಗೆ ಕನ್ನಡದ ಪ್ರಾಚೀನ ಕವಿಗಳು ನಮಗೆ ಮಾರ್ಗದರ್ಶನ ಮಾಡಿದ್ದಾರೆ. ಒಬ್ಬ ಇತಿಹಾಸಕಾರನು ವಿಶಾಲವಾದ

ಭರತ ಖಂಡದಲ್ಲಿ ಕರ್ನಾಟಕ ರಾಜ್ಯವು "ಲೋಹಗಳಲ್ಲಿ ಶ್ರೇಷ್ಠವಾದ ಚಿನ್ನ, ವೃಕ್ಷಗಳಲ್ಲಿ ಶ್ರೇಷ್ಠವಾದ ಗಂಧ, ಪ್ರಾಣಿಗಳಲ್ಲಿ ಉತ್ತುಂಗವಾದ ಆನೆ, ನದಿಗಳಲ್ಲಿ ಪವಿತ್ರವಾದ ಕಾವೇರಿ-ಇವು ಗಳಿಂದ ಕಂಗೊಳಿಸುತ್ತದೆ." ಎಂದು ಹೇಳಿದ್ದಾರೆ ಒಬ್ಬ ಕವಿಯು "ಹೂಗಳ ಕಂಪು, ಮಾರುತನ ತಂಪು, ಗಿಡಗಳ ಗುಂಪು, ಕೋಕಿಲಗಾನದ ಆಲಿಂಪು, ನೀರಿಯರ ಪೆಂಪು, ವನಂಗಳ ಸೊಂಪು-ಇವುಗಳಿಂದ ಕೂಡಿದ ಕನ್ನಡನಾಡು ಭಾರತಾಂಬೆಯ ಮೂಗುತಿ ನತ್ತು." ಎಂದು ಹೇಳುವ ಮಾತು ನಿಜಕ್ಕೂ ಸತ್ಯವಾದದ್ದೇ. ಕರ್ನಾಟಕ ಏಕೀಕರಣ, ಕರ್ನಾಟಕ ಸರ್ವಾಂಗೀಣ ಪ್ರಗತಿಗೆ ಮೂಲಮಂತ್ರವಾಗಿರುವದು.

## ೧೧ ಇಂಗ್ಲೀಷ ಶಿಕ್ಷಣ ಹಾಗೂ ರಾಷ್ಟ್ರೀಯತೆಯ ಉದಯ

ಬ್ರಿಟಿಶ್‌ರು ಭಾರತೀಯರನ್ನು ಶೈಕ್ಷಣಿಕ ಕ್ಷೇತ್ರದಲ್ಲಿ ಉದ್ದೇಶಪೂರ್ವಕವಾಗಿಯೇ ಪ್ರಗತಿಪರರನ್ನಾಗಿ ಮಾಡಿರಲಿಲ್ಲ. ಸರಕಾರದ ಘೋಷಿತ ಧೋರಣೆಯಾದ ಭಾರತೀಯರನ್ನು ಮೇಲ್ವರ್ಗದ ಜಾಗೆಗಳು ದೊರಕದಂತೆ ದೂರ ಇಡುವದು

ಆದರ ಮೂಲ ಉದ್ದೇಶವಾಗಿತ್ತು, ಮತ್ತು ಭಾರತೀಯರು ನಂಬಿಕೆ ಅನರ್ಹರು ಎಂಬ ಭಾವನೆ ಗವ್ಹರ್ನರ ಜನರಲ್‌ರಾಗಿದ್ದ ಲಾರ್ಡ ಕಾರ್ನವಾಲಿಸ್‌ನಿಂದಲೇ ಪ್ರಾರಂಭವಾಗಿತ್ತು. ಇದರ ಮೂಲ ಉದ್ದೇಶ ಬ್ರಿಟಿಶ್ ಆಳಿಕೆಯು ಹಿಂದುಸ್ಥಾನದಲ್ಲಿ ನಿರಂತರವಾಗಿ ಮುಂದುವರಿಯುವದಾಗಿತ್ತು. ಆದರೆ ಭಾರತದಲ್ಲಿ ಬ್ರಿಟಿಶ್ ಆಳಿಕೆಯ ಪ್ರದೇಶ ವಿಸ್ತಾರವಾಗಿತ್ತು, ತತ್ಪರಿಣಾಮವಾಗಿ ಆಡಳಿತಾತ್ಮಕ ಕಾರ್ಯಗಳು ವಿಶಾಲವಾಗಿ ಇಂಗ್ಲೀಷ ಜನರನ್ನು ಕೆಳದರ್ಜೆಯ ವೃತ್ತಿಗೆ ತುಂಬುವದು ಬ್ರಿಟಿಶರಿಗೆ ವಿಶೇಷ ಖರ್ಚಿನ ಸಮಸ್ಯೆಯಾಗಿತ್ತು. ಆದರೆ ಅದೇ ಜಾಗೆಗಳಿಗೆ ಭಾರತೀಯರನ್ನು ತುಂಬಲು ಅವರಿಗೆ ಸ್ವಲ್ಪ ಇಂಗ್ಲೀಷ ಶಿಕ್ಷಣವನ್ನು ಕೊಟ್ಟರೆ ಕಾರಕೂನರ ಸೇನೆಯನ್ನೇ ತಯಾರು ಮಾಡಿ ಅವರ ಸೇವೆಯನ್ನು ಕಡಿಮೆ ವೆಚ್ಚದಲ್ಲಿ ತೆಗೆದುಕೊಳ್ಳಬಹುದಾಗಿತ್ತು.

ಆದರೆ ಭಾರತೀಯರ ಹೃನ್ಮಂದಿರಗಳಲ್ಲಿ ಸದಾ ಅತೃಪ್ತಿಯು ಹೊಗೆಯಾಡುತ್ತಿತ್ತು. ಇದಕ್ಕೆ ಕಾರಣ ನಾವು (ಭಾರತೀಯರು) ಬ್ರಿಟಿಶರ ನಂಬುಗೆಗೆ ಅಪಾತ್ರರೇ ಎಂಬುವ ವಿಚಾರ ಸದಾ ಅವರನ್ನು ಸುಡುತ್ತಿತ್ತು. ಇಂಗ್ಲೀಷ ಶಿಕ್ಷಣವನ್ನು ಪಡೆದು ಸರಕಾರಿ ಸೇವೆಯಲ್ಲಿ ಪ್ರವೇಶಿಸಲು ಭಾರತೀಯರು ಸದಾ ಉತ್ಸುಕರಾಗಿದ್ದರು. ಆದರೆ ಭಾರತೀಯರಿಗೆ ಪಾಶ್ಚಾತ್ಯ ಶಿಕ್ಷಣ ಕೊಡಬೇಕೋ ಅಥವಾ ಪೌರ್ವಾತ್ಯ

ಶಿಕ್ಷಣ ಮುಂದುವರಿಸಬೇಕೆಂಬುವದರ ಬಗ್ಗೆ ತರ್ಕವಿತರ್ಕಗಳಾದವು (Controversy between Anglicists and Orientalists). ಇಂಗ್ಲೀಷ ಶಿಕ್ಷಣದ ಪ್ರತಿಪಾದಕರು ಪಾಶ್ಚಾತ್ಯ ತಳಹದಿಯ ಮೇಲೆ ಭಾರತೀಯರಿಗೆ ಇಂಗ್ಲೀಷ ಶಿಕ್ಷಣವನ್ನು ಕೊಡಬೇಕೆಂದು, ಇತರೆ ಪೌರ್ವಾತ್ಯರು ಮಾತ್ರ ದೇಶೀಯ ವಿದ್ಯೆಗೆ ಪುರಸ್ಕಾರ ಕೊಡಬೇಕೆಂದು ಪ್ರತಿಪಾದಿಸಿದರು. ಆಧುನಿಕ ಯುಗದ ಪ್ರವರ್ತಕರಾದ ರಾಜಾ ರಾಮಮೋಹನ ರಾಯ್‌ರು ಭಾರತೀಯರಿಗೆ ಇಂಗ್ಲೀಷ ಶಿಕ್ಷಣವನ್ನೇ ಕೊಡಬೇಕೆಂದು ಆಗ್ರಹ ಮಾಡಿದರು. ಎರಡು ಸಾವಿರ ವರ್ಷಗಳಿಂದ ಭಾರತೀಯರು ಸಂಸ್ಕೃತ ಶಿಕ್ಷಣವನ್ನೇ ಕಲಿಯುತ್ತ ಬಂದಿದ್ದಾರೆ. ಆದರೆ ಅದು ಇನ್ನು ಮೇಲೆ ನಮಗೆ ಸಾಕು ಎಂದು ನಿಷ್ಠುರವಾಗಿ ಹೇಳಿದ್ದಾರೆ. ಆಗಿನ ಪಾರ್ಲಿಮೆಂಟಿನ ಕಾಬಿನ ಸದಸ್ಯರಾದ ಲಾರ್ಡ ಮೆಕಾಲೆಯವರೂ ಸಹ ಇಂಗ್ಲೀಷ ಶಿಕ್ಷಣವನ್ನೇ ಭಾರತೀಯರಿಗೆ ಕೊಡಬೇಕೆಂದು ಒತ್ತಿ ಹೇಳಿದ್ದಾರೆ. ಅದರಂತೆ ಆಗಿನ ಗವರ್ನರ ಜನರಲ್ ಲಾರ್ಡ ವಿಲಿಯಂ ಬೆಂಟಿಂಕ್‌ರು ೧೮೩೫ರಲ್ಲಿ ಇಂಗ್ಲೀಷ ಶಿಕ್ಷಣವನ್ನೇ ಕೊಡಬೇಕೆಂಬ ನಿರ್ಣಯವನ್ನು ಪಾಸು ಮಾಡಿದರು. ಮತ್ತು ದೇಶೀಯರಿಗೆ ಸಾಹಿತ್ಯ ಮತ್ತು ವಿಜ್ಞಾನದಲ್ಲಿ ಪ್ರೋತ್ಸಾಹವನ್ನು ಕೊಡುವದಲ್ಲದೆ, ಶಿಕ್ಷಣಕ್ಕೆ ವಿಶೇಷವಾದ ಹಣವನ್ನು ಇಂಗ್ಲೀಷ ಶಿಕ್ಷಣಕ್ಕಾಗಿಯೇ ಮೀಸಲಾಗಿಡುವದೇ ಬ್ರಿಟಿಶ್ ಸರಕಾರದ ಗುರಿ ಎಂದು ಸಾರಿದರು.

ಅಂದಿನಿಂದ ಭಾರತೀಯರಿಗೆ ಇಂಗ್ಲೀಷ ಶಿಕ್ಷಣ ಕೊಡಲು ಪ್ರಾರಂಭಿಸಿದರು. ಇಂಗ್ಲೀಷ ಶಿಕ್ಷಣ ಪ್ರಾರಂಭವಾದಂದಿನಿಂದ ಅದು ಭಾರತೀಯರಲ್ಲಿ ವಿಚಾರ ವಿನಿಮಯ ಮತ್ತು ರಾಷ್ಟ್ರೀಯ ಐಕ್ಯತೆಗೆ ಎಡೆಮಾಡಿಕೊಟ್ಟಿತು ಮತ್ತು ಭಾರತೀಯರಲ್ಲಿ ರಾಷ್ಟ್ರೀಯತೆಯ ಪ್ರಜ್ಞೆ ಮೂಡಿಸಿತು. ಭಾರತೀಯರಿಗೆ ಕ್ರಮೇಣವಾಗಿ ಆಗುತ್ತಿರುವ ಅನ್ಯಾಯದ ಅರಿವಾಗತೊಡಗಿತು. ಅವರು ವಿವಿಧ ರಾಜ್ಯಗಳ ಜನರೊಡನೆ ಪರಸ್ಪರ ವಿಚಾರ ವಿನಿಮಯ ಮಾಡಲು ಅಡಿಗಲ್ಲನ್ನು ಹಾಕಿತು. ರಾಷ್ಟ್ರೀಯ ಅಭಿಪ್ರಾಯವನ್ನು ರೂಪಿಸಲು ಸಹಾಯಕವಾಯಿತು. ಒಟ್ಟಿನಲ್ಲಿ ಬೇರೊಂದು ಸುಶಿಕ್ಷಿತ ವರ್ಗವೆ ನಿರ್ಮಾಣವಾಗಿ ಹೊಸ ಅಧ್ಯಾಯವು ಪ್ರಾರಂಭವಾಯಿತೆಂದೇ ಹೇಳಬಹುದು. ಅದ ರಂತೆ ಇಂಗ್ಲೀಷ ಶಿಕ್ಷಣವು ಭಾರತದಲ್ಲಿ ರಾಷ್ಟ್ರೀಯ ಜಾಗೃತಿಗೆ ಒಂದು ಪ್ರಬಲವಾದ ಕಾರಣವಾಯಿತೆಂದು ಹೇಳಬಹುದು.

೧೯ನೆಯ ಶತಮಾನದ ಕೊನೆಯ ಭಾಗದಲ್ಲಿ ಕರ್ನಾಟಕದಲ್ಲಿ ರಾಷ್ಟ್ರೀಯತೆಯ ಚಳುವಳಿಯು ರಾಜಕೀಯ ಮತ್ತು ಸಾಂಸ್ಕೃತಿಕ ಚಳುವಳಿಯ ರೂಪವನ್ನು ತಾಳಿತು. ಅದು ಜನರ ಜೀವನ ಮತ್ತು ವಿಚಾರ ಸರಣಿಯನ್ನು ರೂಪಿಸಿತು. ೨೦ ನೆಯ ಶತಮಾನದ ಪ್ರಾರಂಭದಲ್ಲಿ ಮುಂಬೈ ಕರ್ನಾಟಕ ದಲ್ಲಿ ಇಂಗ್ಲೀಷ ಶಿಕ್ಷಣ ಪಡೆದಂಥ ಕೆಲವೇ ಪದವೀಧರರಿ ದ್ದರು. ಕ್ರಿಶ್ಚನ್ ಮಿಶನರಿಗಳು ಕರ್ನಾಟಕದ ಬೇರೆ ಬೇರೆ

ಭಾಗಗಳಲ್ಲಿ ಇಂಗ್ಲೀಷ ಶಾಲೆಗಳನ್ನು ಪ್ರಾರಂಭಿಸಿದವು. ಅಲ್ಲಲ್ಲಿ
ಉಚ್ಚ ಶಿಕ್ಷಣದ ಸಲುವಾಗಿ ಕಾಲೇಜುಗಳು ಪ್ರಾರಂಭ
ವಾದವು. ಇದರಿಂದ ನೂರಾರು ಯುವಕ ಪದವೀಧರರು
ಅಂಥ ಇಂಗ್ಲೀಷ ಶಿಕ್ಷಣ ಪಡೆದ ಯುವಕರು ರಾಷ್ಟ್ರೀಯ
ಚಳುವಳಿಯ ನಾಯಕತ್ವ (ಧುರೀಣತ್ವ) ವನ್ನು ವಹಿಸಿದರು
ತತ್ಪರಿಣಾಮವಾಗಿ ಅನೇಕ ಸಂಘ ಸಂಸ್ಥೆಗಳು ಸ್ಥಾಪಿಸಲ್ಪ
ಟ್ಟವು.

ಭಾರತೀಯರ ರಾಜಕೀಯ ಆದರ್ಶಗಳು ಸಹ ಇಂಗ್ಲಂಡದ
ಇಂಗ್ಲೀಷ ಶಿಕ್ಷಣದ ಫಲಿತಾಂಶಗಳೇ. ಹೀಗೆ ಇಂಗ್ಲೀಷರ
ಶಿಕ್ಷಣ ಹೊಂದಿದ ಯುವಕರು ಕರ್ನಾಟಕದಲ್ಲಿ ಪ್ರಾರಂಭ
ವಾದ ಎಲ್ಲ ಚಳುವಳಿಗಳ ಮುಂದಾಳತ್ವವನ್ನು ವಹಿಸಿದರು.
ಆದರಂತೆ ಜನಜಾಗೃತಿಯನ್ನು ಮಾಡಿದರು. ಗಾಂಧೀಜಿ ಮತ್ತು
ಸರದಾರ ಪಟೇಲರ ನೇತೃತ್ವದಲ್ಲಿ ವಿಶೇಷವಾಗಿ ಕರನಿರಾ
ಕರಣೆ ಚಳುವಳಿಯಲ್ಲಿ ಗುಜರಾತ ಮತ್ತು ಬಾರ್ಡೋಲಿಗಳು
ವಿಕ್ರಮವನ್ನು ಸಾಧಿಸಿದ್ದವು. ಕನಾಟಕವು ಈ ವಿಕ್ರಮವನ್ನು
ಸಾಧಿಸಲು ಇತರ ಪ್ರಾಂತಗಳಂತೆ ಸಮರ್ಥವಾಗಲು ಮರಾಠಿ
ಯರಿಗಾಗಿ ಪ್ರಯತ್ನ ಮಾಡಿತು. ಕರ್ನಾಟಕದಲ್ಲಿ ವಿಶೇಷತಃ
ಅಂಕೋಲಾ, ಶಿರಸಿ, ಸಿದ್ದಾಪೂರ ಜನರಲ್ಲಿ ಗಾಂಧೀಜೀ
ಯವರ ಬಗ್ಗೆ ಅಚಲ ನಿಷ್ಠೆ ವ್ಯಕ್ತವಾಯಿತು. ೧೯೩೦ರಿಂದಿ
ಚೆಗೆ ಕರ್ನಾಟಕದ ಅನೇಕ ಸುಶಿಕ್ಷಿತ ತರುಣ ಮುಖಂಡರ

ಗುಂಪು ಬಂದು ಕರ್ನಾಟಕದಲ್ಲಿ ಸ್ವಾತಂತ್ರ್ಯ ಸಿಗುವವರೆಗೂ
ಗಾಂಧೀ ಸ್ವಾತಂತ್ರ್ಯ ಚಳುವಳಿಯ ಭವಿತವ್ಯದ ಬಗೆಗೆ
ಹೋರಾಡಿದರು. ಇದು ಶಾಂತಿಯುತ ಯುದ್ಧವಾಗಿತ್ತು.
ಸಾಮ್ರಾಜ್ಯಗಳಲ್ಲಿಯೇ ಧೈರ್ಯದಿಂದ ಎದುರಿಸಿದ ಅತಿ ಬಲಿಷ್ಠ
ವಾದ ಶಕ್ತಿಯ ನಿಶ್ಯಸ್ತ್ರ ಜನತೆಯ ಸ್ವಾತಂತ್ರ್ಯ ಸಾಧನೆ
ಯಿದು. ಪ್ರತ್ಯಕ್ಷ ಭಾಗವಹಿಸಿದವರ ಸಂಖ್ಯೆಯ ಪ್ರಮಾಣದಲ್ಲಿ
ಕಡಿಮೆಯಿದ್ದರೂ ಪ್ರತಿಯೊಬ್ಬನಲ್ಲಿಯೂ ಸ್ವಾತಂತ್ರ್ಯದ
ಕಿಚ್ಚು ತುಂಬಿತ್ತು. ಹೀಗೆ ಇಂಗ್ಲೀಷ ಶಿಕ್ಷಣವು ಭಾರತ
ದಲ್ಲಿ ಕರ್ನಾಟಕದ ಮುಖಾಂತರ ಅಂದಿನ ಕಾಲದ ವಿದ್ಯಾ
ನಂತರಲ್ಲಿ ರಾಷ್ಟ್ರೀಯ ಐಕ್ಯತೆಯ ಅಸ್ತಿಭಾರ ಹಾಕಿತು.
ಜಾತಿ, ಧರ್ಮ, ಮತ, ಪಂಥಗಳನೇಕವಿದ್ದರೂ, ಭಾಷಾ
ಮತ್ತು ಪ್ರಾಂತೀಯತೆಗಳು ತಾಂಡವವಾಡುತ್ತಿದ್ದರೂ ಎಲ್ಲ
ಜನರನ್ನೂ ಒಂದೇ ರಾಜಕೀಯ ವೇದಿಕೆಯ ಮೇಲೆ ಕಲೆ
ಯುವಂತೆ ಮಾಡಿತು.

## ೧೨ ಪಾಶ್ಚಾತ್ಯ ಪಂಡಿತರ ಪಾತ್ರ

ಪಾಶ್ಚಾತ್ಯ ಪಂಡಿತರಾದ ಮೆಕೆಂ ಝಿವರ್ತ್, ಫ್ಲೀಟ್ ವೈಕ್ಸ್, ಕಿಟೆಲ್, ಝಿಗ್ಲರ್ ಸ್ಟೋಕ್ಸ ಮತ್ತು ರೈಸ್ ಮುಂತಾದ ಮಹನೀಯರು ಕರ್ನಾಟಕದ ಸಂಪದ್ಭರಿತ ವಾದ ಸಾಹಿತ್ಯವನ್ನು ಅಭ್ಯಸಿಸಿದರು. ಡಾ|| ಫ್ಲೀಟರು ಕನ್ನಡ ಶಾಸನಾಧಾರಗಳಿಂದ ೧೮೮೧ರಲ್ಲಿ "The Dynasties of Kanarese Districts" ಎಂಬ ಗ್ರಂಥವನ್ನು ಇಂಗ್ಲೀಷಿನಲ್ಲಿ ಬರೆದರು. ಅದೇ ಕಾಲದಲ್ಲಿ ರೈಸ್, ಕಿಟೆಲ್, ಆರ್. ನರಸಿಂಹಾಚಾರ ಮೊದಲಾದ ಮಹನಿಯರು ಕರ್ನಾಟಕ ಶಾಸನಗಳ ಅನೇಕ ವರದಿಗಳನ್ನು ಸಂಪಾದಿಸಿ ಪ್ರಕಟಿಸಿದರು. ಡಾ|| ಎಫ್. ಕಿಟೆಲ್‌ರು ಕನ್ನಡ-ಇಂಗ್ಲೀಷ ನಿಘಂಟನ್ನು ಸಂಪಾದಿಸಿ ಪ್ರಕಟಿಸಿದ್ದಾರೆ. ಇದು ಕನ್ನಡ ಶಬ್ದಕೋಶಕ್ಕೆ ಪ್ರಮಾಣಭೂತವಾಗಿದೆ. ಹದಿನೆಂಟು ವರ್ಷಗಳ ಸತತ ಸಂಶೋಧನೆಯ ಫಲವೇ ಆ ಕೃತಿ. ಇಂದಿಗೂ ಸಾಲಿನಲ್ಲಿ ನಿಲ್ಲುವ ಕೃತಿ ಡಾ|| ಝುಘಲರ್‌ರ ತುಳು-ಇಂಗ್ಲೀಷ ನಿಘಂಟು, ಡಬ್ಲ್ಯು. ರೀವ್ಹರು ಕನ್ನಡ-ಇಂಗ್ಲೀಷ ನಿಘಂಟನ್ನು ಮತ್ತು ಇಂಗ್ಲೀಷ-ಕನ್ನಡ ನಿಘಂಟನ್ನು ತಯಾರಿಸಿದ್ದಾರೆ. ಅವು ಕನ್ನಡವನ್ನು ಕಲಿಯುವವರಿಗೆ ಕೈದೀಪವಾಗಬಲ್ಲವು. ಇವರೆಲ್ಲ

ಉತ್ತಮ ದರ್ಜೆಯ ನಿಘಂಟುಗಳನ್ನು ಒದಗಿಸಿ ಕನ್ನಡದ ಪುನರುಜ್ಜೀವನಕ್ಕೆ ಅಮೂಲ್ಯವಾದ ಕೊಡುಗೆಗಳನ್ನು ಸಲ್ಲಿಸಿದ್ದಾರೆ. ಆರ್. ನರಸಿಂಹಾಚಾರ್ಯರು "ಕರ್ನಾಟಕ ಕವಿ ಚರಿತೆ"ಯನ್ನು ಬರೆದು ಪ್ರಕಟಿಸಿದರು. ಅದು ಮೂರು ಮಹಾ ಸಂಪುಟಗಳಲ್ಲಿದೆ. ಇದು ಸುಮಾರು ೧೨೦೦ ಕವಿಗಳ ಸಂಕ್ಷಿಪ್ತ ಮಾಹಿತಿಯನ್ನು ಕ್ರಿ. ಶ. ೯೦೦ ರಿಂದ ೧೯೦೦ ರ ವರೆಗೆ ಒದಗಿಸುತ್ತದೆ. ಈ ಎಲ್ಲ ಮಹನೀಯರ ಸ್ಫೂರ್ತಿದಾಯಕ ಪ್ರಭಾವದಿಂದ ಕನ್ನಡ ಸಾಹಿತ್ಯದಲ್ಲಿ ನವೋದಯ ಪ್ರಾರಂಭವಾಯಿತೆಂದು ಹೇಳಬಹುದು. ಈ ಪಂಡಿತ ಪಾದ್ರಿಗಳು ಕನ್ನಡ ಸಾಹಿತ್ಯದ ಕೃಷಿಗೆ ತಮ್ಮ ಅಮೂಲ್ಯವಾದ ವೇಳೆಯನ್ನು ಮುಡುಪಾಗಿಟ್ಟಿದ್ದಾರೆ. ಈ ಧರ್ಮಪ್ರಚಾರಕರಲ್ಲಿ ಕೆಲವರು ಯುರೋಪಿನ ವಿದ್ವಾಂಸರೊಡನೆಯೂ ದೇಶಿಯ ಪಂಡಿತರೊಡನೆಯೂ ಸಂಪರ್ಕ ಬೆಳೆಯಿಸಿಕೊಂಡು ಪಂಡಿತ ಸಂಘಗಳನ್ನು ಸ್ಥಾಪಿಸಿದರು. ತತ್ಪರಿಣಾಮವಾಗಿ ಕನ್ನಡಿಗರು ತಮ್ಮ ಅಜ್ಞಾನದ ಪೊರೆಯನ್ನು ಕಳಚಿಹಾಕಿದರು. ತಮ್ಮ ಗತ ವೈಭವದ ಬಗ್ಗೆ ಅಭಿಮಾನ ತಾಳಿದರು. ಇದು ಕನ್ನಡದ ಅರಿವಿನ ಬೆಳವಣಿಗೆಗೆ ಸಹಾಯ ಮಾಡಿತು.

# ೧೩ ಕನ್ನಡ ಲೇಖಕರು

ಕನ್ನಡವಲ್ಲಿ ದೇಶಾಭಿಮಾನದ ಕೆಚ್ಚನ್ನು ಮೂಡಿಸಿದ ಬಹುಪಾಲು ಶ್ರೇಯಸ್ಸು ಕನ್ನಡದ ಉದ್ದಾಮ ಪಂಡಿತರಿಗೆ ಸೇರುತ್ತದೆ. ಹರ್ಡೇಕರ ಮಂಜಪ್ಪನವರು ತಮ್ಮ ಲೇಖನದ ಮೂಲಕ ಜನಜಾಗೃತಿಯನ್ನು ಮಾಡಿದರು. ಗಾಂಧೀಜಿಯವರ ಜೀವನ ಮತ್ತು ಸಿದ್ಧಾಂತವನ್ನೊಳಗೊಂಡ ರಾಷ್ಟ್ರ ಜೀವನ ಗ್ರಂಥಮಾಲೆಯನ್ನು ಬರೆದು ಪ್ರಕಟಿಸಿದರು. ಗಾಂಧೀಜಿಯವರ ಸತ್ಯಾಗ್ರಹದ ಅಸ್ತ್ರವನ್ನು ಪ್ರಚುರಪಡಿಸಿ ತನ್ಮೂಲಕ ರಾಷ್ಟ್ರೀಯತ್ವದ ತತ್ವ ಸಿದ್ಧಾಂತಗಳನ್ನು ಪ್ರಚಾರ ಮಾಡಿದರು. ಅವರ ರಾಷ್ಟ್ರೀಯತ್ವದ ಬಗೆಗಿನ ಮಹತ್ವದ ಕೃತಿಯೆಂದರೆ 'ಭಾರತೀಯರ ದೇಶಭಕ್ತಿ' ೧೯೩೧ ರಲ್ಲಿ ಪ್ರಕಟವಾಯಿತು. ಪ್ರಸಿದ್ಧ ಕಾದಂಬರಿಕಾರರಾದ ವೆಂಕಟಾಚಾರ್ಯ ಮತ್ತು ಗಳಗನಾಥರು ತಮ್ಮ ಕಾದಂಬರಿಗಳ ಮೂಲಕ ಸ್ವಾತಂತ್ರ್ಯದ ಸಂದೇಶವನ್ನು ಸಾರಿದರು. ಜಾನಪದ ಸಾಹಿತ್ಯವನ್ನು ಉತ್ಕೃಷ್ಟಗೊಳಿಸಿದವರಲ್ಲಿ ಕೀರ್ತನಕಾರರಾದ ಸಕ್ಕರಿ ಬಾಳಾಚಾರ್ಯ, ಮದವೀಡಕರ್ ಮತ್ತು ಇನ್ನಿತರರಿದ್ದರೆಂದು ಹೇಳಬಹುದು. ನಾಟಕಕಾರರಲ್ಲಿ ನಲವಡಿ ಶ್ರೀಕಂಠ ಶಾಸ್ತ್ರಿಗಳು, ಕಂದಗಲ್ ಹನುಮಂತರಾಯರು,

ಗರುಡ ಸದಾಶಿವರಾಯರು ಶ್ರೇಷ್ಠ ನಾಟಕಗಳನ್ನು ಬರೆದು ಜನಜಾಗೃತಿಯನ್ನು ಮಾಡಿದರು. ಹೀಗೆ ಕರ್ನಾಟಕವು ಉನ್ನತ ರಾಜಕೀಯ ಪ್ರಜ್ಞೆಯುಳ್ಳವರನ್ನು ಸಾಮಾಜಿಕ ವಿಜ್ಞಾನಿಗಳನ್ನು ಪಡೆದು ಕರ್ನಾಟಕದ ಜನರಲ್ಲಿ ದೇಶಾಭಿಮಾನದ ಕೆಚ್ಚನ್ನು ಹೊತ್ತಿಸಿತು.

## ೧೪ ಕನ್ನಡ ಪತ್ರಿಕೆಗಳು

ಭಾರತದಲ್ಲಿ ಪತ್ರಿಕೆಗಳ ಪ್ರಾರಂಭ ಪಾಶ್ಚಾತ್ಯ ಪತ್ರಿಕೋದ್ಯಮದಿಂದ ಆಯಿತೆಂದು ಹೇಳಬಹುದು. ಅದರಂತೆ ಭಾರತದ ಇತರ ರಾಜ್ಯಗಳಂತೆ ಕರ್ನಾಟಕದಲ್ಲಿಯೂ ಪತ್ರಿಕೋದ್ಯಮದ ಬೆಳವಣಿಗೆಯಾಯಿತು. ಅಖಿಲ ಭಾರತ ಕಾಂಗ್ರೆಸ್ಸು ಜನಿಸಿದ ನಂತರ ರಾಷ್ಟ್ರೀಯತ್ವದ ಚಳುವಳಿಗಳಲ್ಲಿ ಭಾರತೀಯ ಪತ್ರಿಕೆಗಳ ಪಾತ್ರ ಮಹತ್ವದ್ದು. ಅದರಂತೆ ಕರ್ನಾಟಕದಲ್ಲಿಯೂ ಕೂಡ ಅವುಗಳ ಪಾತ್ರ ಹಿರಿದಾದುದಾಗಿದೆ.

ಕರ್ನಾಟಕದಲ್ಲಿ ಪತ್ರಿಕೋದ್ಯಮವು ಉತ್ತರ ಕರ್ನಾಟಕದ ನಾಲ್ಕು ಜಿಲ್ಲೆಗಳಲ್ಲಿ (ಧಾರವಾಡ, ವಿಜಾಪೂರ, ಬೆಳಗಾಂವ ಮತ್ತು ಕಾರವಾರ) ಮತ್ತು ಮೈಸೂರಿನಲ್ಲಿಯೂ

ಬೇಗ ಪ್ರಸಾರವಾಯಿತು. ಇದಕ್ಕಿಂತಲೂ ಮೊದಲು ಬಳ್ಳಾರಿ ಮತ್ತು ಮಂಗಳೂರು ಜಿಲ್ಲೆಗಳಲ್ಲಿ ವಿಕಾಸಗೊಂಡಿತ್ತು. ಆಗ ಎರಡು ಜಿಲ್ಲೆಗಳು ಮದ್ರಾಸ್ ಪ್ರಾಂತದಲ್ಲಿದ್ದವು. ಬಾಸೆಲ್ ಮಿಶನ್ ಅಚ್ಚುಕೂಟ ವು ( Basel Mission Press ) ಸಾಕಷ್ಟು ಪ್ರಬಲವಾದ ಮೇಲೆ ಬಳ್ಳಾರಿಯಿಂದ ಹೊರಡುತ್ತಿದ್ದ "ಕನ್ನಡ ಸಮಾಚಾರ"ವೆಂಬ ಪತ್ರಿಕೆಯನ್ನು ಪಾದ್ರಿ ಪಂಡಿತರು ಮಂಗಳೂರಿಗೆ ತಂದು ಹೊರಡಿಸಲಾರಂಭಿಸಿದರು.

ಉತ್ತರ ಕರ್ನಾಟಕದಲ್ಲಿ ಪತ್ರಿಕೋದ್ಯಮವು ೧೮೫೦ರ ಸುಮಾರಿಗೆ ಪ್ರಾರಂಭವಾಗಿ 'ಭಾವಾ' 'ಚಂದ್ರೋದಯ' ಮತ್ತು 'ಧಾರವಾಡ ವೃತ್ತಿ'ಗಳೆಂಬ ಮೂರು ಪತ್ರಿಕೆಗಳು ಧಾರವಾಡದಿಂದ ಹೊರಡುತ್ತಿದ್ದವು. ಇವಲ್ಲದೇ ಇನ್ನು ಮೂರು ಪತ್ರಿಕೆಗಳು 'ವಿಜಯ' 'ರಾಜಹಂಸ' ಮತ್ತು 'ಕರ್ನಾಟಕ ವೃತ್ತ' ಧಾರವಾಡದಿಂದಲೇ ಹೊರಡುತ್ತಿದ್ದವು. ಕನ್ನಡ ಭಾಷೆಯ ಪುನರುದ್ಧಾರ ಮತ್ತು ರಾಜಕೀಯ ಪ್ರಜ್ಞೆಯನ್ನು ಮೂಡಿಸುವದು ಈ ಪತ್ರಿಕೆಗಳ ಉದ್ದೇಶವಾಗಿತ್ತು. ೧೮೮೦ರ ವೇಳೆಗೆ ಬೆಳಗಾವಿಯಲ್ಲಿ ಕನ್ನಡಿಗರ ಮೇಲೆ ಮರಾಠಿಗರ ಪ್ರಭಾವವನ್ನು ತಡೆಗಟ್ಟಲು ಮೂರು ಪತ್ರಿಕೆಗಳು ಪ್ರಾರಂಭವಾದವು. ೧೮೯೦ರ ತರುವಾಯ ಹಲವು ಪತ್ರಿಕೆಗಳು ಪ್ರಾರಂಭವಾದವು. ಅವುಗಳಲ್ಲಿ ದೇಶಭಕ್ತಿಯುಕ್ತ ಲೇಖನಗಳು ಪ್ರಕಟವಾಗುತ್ತಿದ್ದವು. ಹುಬ್ಬಳ್ಳಿಯಲ್ಲಿ

ಬಿಂದೂರಾಯರು ಸಂಪಾದಿಸುತ್ತಿದ್ದ "ಕನ್ನಡ ಕೇಸರಿ" ಬಾಗಲ ಕೋಟೆಯ ಕೆರೂರ ವಾಸುದೇವಾಚಾರ್ಯರು ಸಂಪಾದಿಸುತ್ತಿದ್ದ "ಸಚಿತ್ರ ಭಾರತ" ವಾರಪತ್ರಿಕೆಗಳು ಪ್ರಾರಂಭವಾದವು ೧೯೨೧ರಲ್ಲಿ ಹರ್ಡೇಕರ ಮಂಜಪ್ಪನವರು "ಧನುರ್ಧಾರಿ" ಪತ್ರಿಕೆಯನ್ನು ಹೊರಡಿಸಿದರು ೧೯೨೨ರಲ್ಲಿ ವಿಜಾಪುರದಿಂದ ಪ್ರಾರಂಭವಾದ "ಕರ್ನಾಟಕ ವೈಭವ" ವಾರ ಪತ್ರಿಕೆಯ ಸಂಪಾದಕತ್ವವನ್ನು ೧೯೨೨ರಲ್ಲಿ ಮೊಹರೆ ಹನುಮಂತರಾಯರು ವಹಿಸಿಕೊಂಡರು. ಭಾರತೀಯರನ್ನು ಸ್ವಾತಂತ್ರ್ಯಕ್ಕೆ ಅಣಿಮಾಡುವದೇ ಈ ಪತ್ರಿಕೆಯ ಗುರಿಯಾಗಿತ್ತು. ೧೯೨೧ರ ಸುಮಾರಿಗೆ ಆರ್. ಆರ್. ದಿವಾಕರರ ಸಂಪಾದಕತ್ವದಲ್ಲಿ 'ಕರ್ಮವೀರ' ವಾರಪತ್ರಿಕೆ ಧಾರವಾಡದಲ್ಲಿ ಪ್ರಾರಂಭವಾಯಿತು. ಅದು ಈಗ ಹುಬ್ಬಳ್ಳಿಯಿಂದ ಹೊರಡುತ್ತಿದೆ. ಆಲೂರ ವೆಂಕಟರಾಯರ ಸಂಪಾದಕತ್ವದಲ್ಲಿ 'ಜಯಕರ್ನಾಟಕ'ವೆಂಬ ರಾಷ್ಟ್ರೀಯ ಮಾಸಪತ್ರಿಕೆಯು ಪ್ರಾರಂಭವಾಯಿತು. ೧೯೩೩ರಲ್ಲಿ 'ಸಂಯುಕ್ತ ಕರ್ನಾಟಕ' ಮೊದಲು ವಾರಪತ್ರಿಕೆಯಾಗಿ ಅನಂತರ ಮೊಹರೆ ಹನುಮಂತ ರಾಯರ ಸಂಪಾದಕತ್ವದಲ್ಲಿ ದಿನಪತ್ರಿಕೆಯಾಯಿತು. ಇದು ಇಂದಿಗೂ ರಾಷ್ಟ್ರೀಯ ಪತ್ರಿಕೆಯಾಗಿದೆ. ಎಲ್ಲ ಮಾಸಪತ್ರಿಕೆಗಳು, ವಾರಪತ್ರಿಕೆಗಳು ಮತ್ತು ದಿನಪತ್ರಿಕೆಗಳು ದೇಶಾಭಿಮಾನದ ಭಾವನೆಗಳನ್ನು ಪ್ರಕಟಿಸಿ ಬ್ರಿಟಿಶ್ ಸರಕಾರವನ್ನು ಟೀಕಿಸಿ ಜನತೆಯನ್ನು ಎಚ್ಚರಿಸಿದವು.

ಹಳೆಯ ಮೈಸೂರು ಸಂಸ್ಥಾನದಲ್ಲಿ :-

೧೮೪೦ರಲ್ಲಿ ಮೊದಲನೆಯ ಮುದ್ರಣಾಲಯ ಪ್ರಾರಂಭವಾಯಿತು. ರೆವ್ಹರೆಂಡ ಜೆ. ಗ್ಯಾರೆಟ ಅದರ ಸಂಸ್ಥಾಪಕರು. ಧರ್ಮ ಪ್ರಚಾರಕ್ಕಾಗಿ ಸಾಹಿತ್ಯವನ್ನು ನಿರ್ಮಿಸಲು ಮುದ್ರಣಾಲಯವನ್ನು ಸ್ಥಾಪಿಸಿದರು. ೧೮೬೫ರಲ್ಲಿ ಮೈಸೂರಿನಲ್ಲಿ ಮೊದಲನೆಯ ಕನ್ನಡ ವಾರಪತ್ರಿಕೆಯಾದ "ಕರ್ನಾಟಕ ಪ್ರಕಾಶಿಕಾ" ಪ್ರಾರಂಭವಾಯಿತು. ರಾಮಾನುಜ ಅಯ್ಯಂಗಾರರ ಸಂಪಾದಕತ್ವದಲ್ಲಿ 'ಹಿತಬೋಧಿನಿ' ಎಂಬ ಕನ್ನಡ ಮಾಸಪತ್ರಿಕೆಯು ಮೈಸೂರಿನಲ್ಲಿ ೧೮೮೧ರಲ್ಲಿ ಪ್ರಾರಂಭವಾಯಿತು. "ಕಾವ್ಯಮಂಜರಿ" ಮತ್ತು "ಗ್ರಂಥಮಾಲೆ" ಇವೆರಡೂ ಸಾಹಿತ್ಯದಲ್ಲಿ ಉನ್ನತಮಟ್ಟದ ಪತ್ರಿಕೆಗಳಾಗಿದ್ದವು. ಶ್ರೀನಿವಾಸ ಅಯ್ಯಂಗಾರರ ಸಂಪಾದಕತ್ವದಲ್ಲಿ "ದೇಶಾಭಿಮಾನಿ" ಎಂಬ ಕನ್ನಡ ವಾರಪತ್ರಿಕೆ ೧೮೯೫ರಲ್ಲಿ ಶ್ರೀಮಾನ್ ವೀರಬಸಪ್ಪ ಅವರ ಸಂಪಾದಕತ್ವದಲ್ಲಿ "ಸ್ಟಾರ್" ಎಂಬ ಕನ್ನಡ ವಾರಪತ್ರಿಕೆಗಳು ೧೯೦೦ರಲ್ಲಿ ಪ್ರಾರಂಭವಾದವು. ಎಮ್. ವೆಂಕಟಕೃಷ್ಣಯ್ಯನವರು ಮೈಸೂರಿನಲ್ಲಿ 'ಕನ್ನಡಮುದ್ರಣದ ಪಿತಾಮಹ'ರೆಂದೆನಿಸಿಕೊಂಡಿದ್ದಾರೆ. ಅವರು "ವೃತ್ತಾಂತ ಚಿಂತಾಮಣಿ" ಎಂಬ ಕನ್ನಡ ವಾರಪತ್ರಿಕೆಯನ್ನು ೧೮೮೫ರಲ್ಲಿ ಪ್ರಾರಂಭಿಸಿದರು. ಅವರಿಬ್ಬರ ಸಹೋದರರಾದ ಎಮ್. ಗೋಪಾಲಯ್ಯಂಗಾರ ಮತ್ತು ಎಮ್. ಶ್ರೀನಿವಾಸಯ್ಯಂಗಾರರನ್ನು ಪತ್ರಿಕೋದ್ಯಮದಲ್ಲಿ ತರಬೇತು

ಮಾಡಿದರು. ಇವರಿಬ್ಬರೂ ೧೮೯೫ರಲ್ಲಿ "ಕನ್ನಡ ನಡೆಗನ್ನಡಿ" ಎಂಬ ಪತ್ರಿಕೆಯನ್ನು ಬೆಂಗಳೂರಿನಲ್ಲಿ ಪ್ರಾರಂಭಿಸಿದರು.

ಡಿ. ವ್ಹಿ. ಗುಂಡಪ್ಪನವರ ಸಂಪಾದಕತ್ವದಲ್ಲಿ "ಕರ್ನಾಟಕ" ಎಂಬ ದ್ವಿವಾರ ಪತ್ರಿಕೆ- ಟಿ. ಟಿ. ಶರ್ಮಾರ ಸಂಪಾದಕತ್ವದಲ್ಲಿ 'ವಿಶ್ವ ಕರ್ನಾಟಕ' (೧೯೨೧) ಎಂಬ ವಾರಪತ್ರಿಕೆ- ಎಸ್. ಎಸ್. ವೆಂಕಟೋಬರಾಯರ ಸಂಪಾದಕತ್ವದಲ್ಲಿ 'ದೇಶ ಬಂಧು" (೧೯೪೭) ಎಂಬ ಕನ್ನಡ ದಿನಪತ್ರಿಕೆಗಳು ಪ್ರಾರಂಭ ವಾದವು. ಈ ಪತ್ರಿಕೆಗಳ ಆದರ್ಶ-ರಾಷ್ಟ್ರೀಯತೆ-ದೇಶ ಭಕ್ತಿ-ಪ್ರಜಾಸತ್ತಾತ್ಮಕ ವಿಚಾರಗಳನ್ನು ಪ್ರಚುರ ಪಡಿಸುವದರ ಸಲುವಾಗಿ ಪ್ರಾರಂಭಮಾಡಿದರು.

ದಕ್ಷಿಣ ಕನ್ನಡ ಜಿಲ್ಹೆಯಲ್ಲಿ :

ಮೈಸೂರಿನಲ್ಲಿ ಅನೇಕ ವಾರಪತ್ರಿಕೆಗಳು ಮತ್ತು ಮಾಸಪತ್ರಿಕೆಗಳು ಪ್ರಾರಂಭವಾದವು. ೧೯೦೫ರಲ್ಲಿ ಕೆಲವಡಿ ಸುಬ್ಬರಾವ್ ಮತ್ತು ಕೆ. ರಾಜಗೋಪಾಲ ಕೃಷ್ಣರಾಯರ ಸಂಪಾದಕತ್ವದಲ್ಲಿ 'ಕೃಷ್ಣಸೂಕ್ತಿ' ಎಂಬ ಪತ್ರಿಕೆ ಉಡುಪಿಯಲ್ಲಿ ಪ್ರಾರಂಭವಾಯಿತು. ಇದಕ್ಕೂ ಮೊದಲು ೧೮೪೩ರಲ್ಲಿ ಮಂಗಳೂರಿನಲ್ಲಿ 'ಮಂಗಳೂರ ಸಮಾಚಾರ' ಮತ್ತು 'ಕ್ರಿಸ್ತ ಸದ್ಧರ್ಮ ದೀಪಿಕೆ'ಗಳೆಂಬ ವಾರಪತ್ರಿಕೆಗಳು ಪ್ರಾರಂಭವಾದವು. ಆದರೆ ಈ ಪತ್ರಿಕೆಗಳು ಕ್ರೈಸ್ತ ಧರ್ಮದ ಪ್ರಚಾರದ ಸಾಧನಗಳಾಗಿದ್ದವು. ೧೯೧೯ರಲ್ಲಿ ಹುರಳಿ ಭೀಮ

ರಾಯರು ಸಂಪಾದಿಸುತ್ತಿದ್ದ 'ಕಂಠೀರವ' ವ್ಹಿ. ಎಸ್. ಕುದ್ವರು ಸಂಪಾದಿಸುತ್ತಿದ್ದ 'ನವಭಾರತ' (೧೯೪೧) ಪತ್ರಿಕೆಗಳು ಪ್ರಾರಂಭವಾದವು. ರಾಷ್ಟ್ರೀಯ ಚಳುವಳಿಗಳಾದ ಹೋಂ ರೂಲ್, ಅಸಹಕಾರ ಚಳುವಳಿಗಳು ಹಲವು ಪತ್ರಿಕೆಗಳಿಗೆ ಜನ್ಮಕೊಟ್ಟವು.

**ಹೈದರಾಬಾದ ಕರ್ನಾಟಕದಲ್ಲಿ :**

ಹೈದರಾಬಾದ ಕರ್ನಾಟಕದಲ್ಲಿ 'ಹೈದರಾಬಾದ ಸಮಾಚಾರ' ಮತ್ತು 'ಸಾಧನಾ' ಎಂಬ ಎರಡು ಕನ್ನಡ ಪತ್ರಿಕೆಗಳು ಪ್ರಾರಂಭವಾಗಿದ್ದವು. ಆದರೆ ಹೈದರಾಬಾದ ಕರ್ನಾಟಕದಲ್ಲಿ ಹೊರಗಿನಿಂದ ಕನ್ನಡ ರಾಷ್ಟ್ರೀಯ ಪತ್ರಿಕೆಗಳು ಬರುತ್ತಿದ್ದವು. ಇಲ್ಲಿಯ ಜನರಲ್ಲಿ ಬೆಳೆಯುತ್ತಿದ್ದ ಅಸಂತೊಷವನ್ನು ಸರಕಾರದ ಅವಗಾಹನೆಗಾಗಿ ಪತ್ರಿಕೆಗಳು ಪ್ರಕಟಿಸುತ್ತಿದ್ದವು

**ಕೊಡಗಿನಲ್ಲಿ :**

ಕೊಡಗು ಕರ್ನಾಟಕ ಏಕೀಕರಣವಾಗುವದಕ್ಕಿಂತ ಮುಂಚೆ ಚೀಫ್ ಕಮೀಶನರ ಪ್ರಾಂತವಾಗಿತ್ತು. 'ಕೊಡಗು' ಮತ್ತು 'ಕೊಡಗ ವೃತ್ತಾಂತ' ಎಂಬ ಎರಡು ಪತ್ರಿಕೆಗಳು ಹೊರಡುತ್ತಿದ್ದವು. ಹೀಗೆ ೧೯ನೆಯ ಶತಮಾನದ ಕೊನೆಯಿಂದ ಸ್ವಾತಂತ್ರ್ಯ ದೊರಕುವತನಕ ರಾಷ್ಟ್ರದ ಬಗೆಗಿರುವ ನಜರ ಕರ್ತವ್ಯ ಮತ್ತು ಜವಾಬ್ದಾರಿಯ ಅರಿವು ಕನ್ನಡ

ವೃತ್ತಪತ್ರಿಕೆಗಳಿಗೆ ಇತ್ತು. ಶೈಕ್ಷಣಿಕ, ಸಾಮಾಜಿಕ, ಸಾಂಸ್ಕೃತಿಕ, ಸಾಹಿತ್ಯಿಕ ಮತ್ತು ರಾಜಕೀಯ ರಂಗಗಳಲ್ಲಿ ಪತ್ರಿಕೆಗಳು ಜನರಿಗೆ ಶಿಕ್ಷಣ ಕೊಡಲು ಮಹತ್ವದ ಪಾತ್ರಗಳನ್ನಾಡಿವೆ. ಇದರ ಒಟ್ಟು ಪರಿಣಾಮ ಏನೂ ಅಲ್ಲದೇ ಕೇವಲ ರಾಷ್ಟ್ರೀಯತೆಯೇ ಆಗಿತ್ತು.

## ೧೫. ಕಾಂಗ್ರೆಸ್ ಮತ್ತು ಕರ್ನಾಟಕ

ಸರ್ ಎ. ಓ. ಹ್ಯೂಮರು ೧೮೮೫ರಲ್ಲಿ ಜನಿಸಿದ ಕಾಂಗ್ರೆಸ್ಸಿನ ಪಿತಾಮಹರೆನಿಸಿಕೊಂಡಿದ್ದಾರೆ. ಭಾರತದಲ್ಲಿ ರಾಷ್ಟ್ರೀಯತೆಯ ಬೆಳವಣಿಗೆಯು ಕಾಂಗ್ರೆಸ್ಸಿನ ಬೆಳವಣಿಗೆಯೊಂದಿಗೆ ಹಾಸುಹೊಕ್ಕಾಗಿದೆ. ಅಂದರೆ ಕಾಂಗ್ರೆಸ್ಸಿನ ಜನನ ಮತ್ತು ಬೆಳವಣಿಗೆಯ ಇತಿಹಾಸವೇ ಭಾರತೀಯ ರಾಷ್ಟ್ರೀಯತೆಯ ಬೆಳವಣಿಗೆಯ ಕಥನವೆಂದು ಹೇಳಬೇಕಾಗುತ್ತದೆ.

ಭಾರತದ ಸ್ವಾತಂತ್ರ್ಯ ಹೋರಾಟದಲ್ಲಿ ಕರ್ನಾಟಕದ ಸ್ತ್ರೀ-ಪುರುಷರು ಅರ್ಥಗರ್ಭಿತವಾದ ಪಾತ್ರವಹಿಸಿದ್ದಾರೆ. ಅದು ನಿಶ್ಶಸ್ತ್ರವಾದ ಚಾರಿತ್ರ್ಯಾರ್ಹ ಹೋರಾಟ. ಈ

ಹೋರಾಟಕ್ಕೆ ಕರ್ನಾಟಕವು ನೀಡಿದ ಕಾಣಿಕೆ ಮಹತ್ವದ್ದು. ಭಾರತದ ಇತರ ರಾಜ್ಯಗಳ ಜನರಂತೆ ಕರ್ನಾಟಕದ ಜನರೂ ಭುಜಕ್ಕೆ ಭುಜಕೊಟ್ಟು ಸ್ವಾತಂತ್ರ್ಯ ಹೋರಾಟದಲ್ಲಿ ಧುಮುಕಿದ್ದಾರೆ. ಆದ್ದರಿಂದ ೧೯ನೆಯ ಶತಮಾನದ ಉತ್ತರಾರ್ಧದಲ್ಲಿ ಅಖಿಲ ಭಾರತ ಕಾಂಗ್ರೆಸ್ಸಿನ ಜನನ ಮತ್ತು ಅದರ ಬೆಳವಣಿಗೆಯ ಹಿನ್ನೆಲೆಯಲ್ಲಿ ಕರ್ನಾಟಕ ರಾಷ್ಟ್ರೀಯತ್ವದ ಚಳುವಳಿಯ ಅಭ್ಯಾಸ ಮಾಡಬೇಕಾಗುವದು.

ಬ್ರಿಟಿಶ್‌ರು 'ಒಡೆದು ಆಳು' ಎಂಬ ಕುಟಿಲ ನೀತಿಯನ್ನು ಅನುಸರಿಸಿದಾಗ್ಯೂ, ಅನೇಕ ಭಾರತೀಯರು ಅನೇಕ ಕಷ್ಟನಷ್ಟಗಳನ್ನು ಎದುರಿಸಿ ಸ್ವಾತಂತ್ರ್ಯ ಹೋರಾಟದಲ್ಲಿ ಅಹೋರಾತ್ರಿ ಹೋರಾಡಿದರು. ಬ್ರಿಟಿಶ್‌ರ ಆಳಿಕೆಯಿಂದಾಗುತ್ತಿದ್ದ ಗರ್ವಭಂಗದ ಅರಿವು ಭಾರತೀಯರಿಗೆ ಆಗುತ್ತಿರುವಾಗಲೇ ಕರ್ನಾಟಕದ ಪರಿಸ್ಥಿತಿಯು ಅದಕ್ಕಿಂತಲೂ ಶೋಚನೀಯವಾಗಿತ್ತು. ಕರ್ನಾಟಕದ ಜನತೆ ಭಾರತದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ತಮ್ಮ ಪಾಲಿನ ಕಾಣಿಕೆಯನ್ನು ಸಲ್ಲಿಸುವಾಗ ಬಹಳ ತೊಂದರೆಗಳು ಎದುರಾದವು ಏಕೆಂದರೆ ಎಲ್ಲ ರಾಜಕೀಯ ಮತ್ತು ಸಾಮಾಜಿಕ ಚಳುವಳಿಗಳು ಹೆಚ್ಚಾಗಿ ದೊಡ್ಡ ದೊಡ್ಡ ಪಟ್ಟಣಗಳಲ್ಲಿಯೋ ಅಥವಾ ನಗರಗಳಲ್ಲಿಯೋ ಅಥವಾ ರಾಜಧಾನಿಗಳಲ್ಲಿಯೋ ಪ್ರಾರಂಭವಾಗುತ್ತಿದ್ದವು. ಆದರೆ ಕರ್ನಾಟಕಕ್ಕೆ ಅಂಥ

ಚಳುವಳಿಯನ್ನು ಪ್ರಾರಂಭಿಸಲು ಪ್ರಮುಖವಾದ ನಗರ ಅಥವಾ ರಾಜಧಾನಿಯೂ ಇರಲಿಲ್ಲ. ಏಕೆಂದರೆ ಕರ್ನಾಟಕವು ಐದು ಪ್ರಾಂತಗಳಲ್ಲಿ ಹರಿದು ಹಂಚಿಹೋಗಿತ್ತು. ಉದಾ ಧಾರವಾಡ, ಬೆಳಗಾವಿ, ವಿಜಾಪೂರ ಮತ್ತು ಕಾರವಾರ ಜಿಲ್ಲೆಗಳು ಮುಂಬೈ ಪ್ರಾಂತದಲ್ಲಿ ಸೇರಿದ್ದವು. ಅಲ್ಲಿಯ ಕನ್ನಡಿಗರು ಸ್ವಾಭಾವಿಕವಾಗಿ ಮಹಾರಾಷ್ಟ್ರದಲ್ಲಿ ನಡೆಯುತಕ್ಕ ರಾಷ್ಟ್ರೀಯ ಚಳುವಳಿಯ ಪ್ರಭಾವಕ್ಕೊಳಗಾಗಿದ್ದವು ಆದರಂತೆ ಇನ್ನುಳಿದ ಭಾಗಗಳು ಮೈಸೂರು ಮತ್ತು ಕೊಡಗುಗಳು ಮದ್ರಾಸಿನಲ್ಲಿ ನಡೆಯುತಕ್ಕ ಆಂದೋಲನೆಗಳ ಪ್ರಭಾವಕ್ಕೂ ಆದರಂತೆ ಹೈದರಾಬಾದ ಕರ್ನಾಟಕವು (ಕಲಬುರ್ಗಿ, ರಾಯಚೂರ ಮತ್ತು ಬೀದರ ಜಿಲ್ಲೆಗಳು) ಹೈದರಾಬಾದ ಪ್ರಾಂತದಲ್ಲಿಯ ಮುಸ್ಲಿಂ ಸತ್ತೆಯ ಪ್ರಭಾವಕ್ಕೊಳಗಾಗಿತ್ತು. ಹೀಗೆ ಕರ್ನಾಟಕದ ವಿವಿಧ ಭಾಗಗಳಲ್ಲಿ ರಾಷ್ಟ್ರೀಯತೆಯ ಚಳುವಳಿಗಳು ಬೇರೆ ಬೇರೆ ರೀತಿಯಲ್ಲಿ ಪ್ರಾರಂಭವಾದವು.

# ಉಪಸಂಹಾರ

೧೯೪೭ರ ಆಗಸ್ಟ ೧೫ರಂದು ಭಾರತವು ಸ್ವತಂತ್ರವಾಯಿತು. ಆ ತರುವಾಯ ಭಾರತ ಸರಕಾರವು ಭಾರತೀಯರ ಸ್ವಾತಂತ್ರ್ಯ ಹೋರಾಟದ ಇತಿಹಾಸವನ್ನು ರಾಷ್ಟ್ರೀಯ ಚಳುವಳಿಗೆ ಸಂಬಂಧಿಸಿದ ವಿವಿಧ ಕ್ಷೇತ್ರಗಳ ಚರಿತ್ರೆಯನ್ನು ಕಲೆಹಾಕಿ ಅನೇಕ ಉದ್ಗ್ರಂಥಗಳನ್ನು ಪ್ರಕಟಿಸಿತು. ನಿಜವಾಗಿಯೂ ಇದೊಂದು ಮಹತ್ವದ ಹಾಗೂ ಅತ್ಯಾವಶ್ಯಕವಾದ ವಿಷಯ. ಆದರಂತೆ ಪ್ರಾಂತೀಯ ಸರಕಾರಗಳೂ ಸಹ ತಮ್ಮ ತಮ್ಮ ರಾಜ್ಯಗಳ ಸ್ವಾತಂತ್ರ್ಯ ಚಳುವಳಿಯ ಇತಿಹಾಸವನ್ನು ನೈಜ ರೀತಿಯಲ್ಲಿ ಬರೆಯಿಸಲು ಹಿಂದೆ ಬೀಳಲಿಲ್ಲ ಭಾರತದಲ್ಲಿಯೇ ಕನ್ನಡ ಮಾತನಾಡುವ ಪ್ರದೇಶಗಳಲ್ಲಿ ರಾಷ್ಟ್ರೀಯತೆಯ ಬೆಳವಣಿಗೆ ಹೇಗಾಯಿತೆಂಬುದನ್ನು ತಿಳಿದುಕೊಳ್ಳಲು ಈ ಕಿರುಹೊತ್ತಿಗೆಯು ಕೆಲಮಟ್ಟಿಗಾದರೂ ಸಹಾಯಕವಾಗಬಹುದು.

ಬ್ರಿಟಿಶ್‌ರ ಆಳಿಕೆ ಭಾರತೀಯರ ಮೇಲೆ ಕೆಲವು ದುಷ್ಪರಿಣಾಮಗಳನ್ನೂ ಮಾಡಿದಂತೆ ಹಲವು ಒಳ್ಳೆಯ ಪರಿಣಾಮಗಳನ್ನು ಸಹ ಮಾಡಿದೆ. ಆದರೆ ಒಂದು ಮಾತು

ಮಾತ್ರ ನಿಜ. ಎರಡು ದೇಶಗಳ ಸಂಸ್ಕೃತಿಗಳು ಸನಿಹಕ್ಕೆ ಬರಲು ಬ್ರಿಟಿಶ್‌ರ ಆಳಿಕೆ ಸಹಾಯಕಾರಿಯಾಯಿತು. ಭಾರತ ಮತ್ತು ಭಾರತೀಯ ರಾಷ್ಟ್ರೀಯತೆಯ ಬೆಳವಣಿಗೆಯ ಮೇಲೆ ಆಗಿರುವ ಪಾಶ್ಚಾತ್ಯ ಪ್ರಭಾವ ಅಪಾರವಾಗಿದೆ. ಭಾರತದ ಇಂದಿನ ರಾಜಕೀಯ ಆದರ್ಶಗಳು ಇಂಗ್ಲಂಡಿನಿಂದಲೇ ಬಳುವಳಿಯಾಗಿ ಬಂದವು-ಅದೂ ಸಹ ಇಂಗ್ಲೀಷ ಶಿಕ್ಷಣದ ಸಂಪರ್ಕಮಾತ್ರದಿಂದಲೇ. ಐಕ್ಯತೆಯ ಪ್ರಜ್ಞೆಯುಂಟಾಗಲು ಹಾಗೂ ಅದರ ಅಭಿವೃದ್ಧಿಯಾಗಲು ಕನ್ನಡಿಗರಲ್ಲಿ ರಾಷ್ಟ್ರೀಯತೆಯ ಬಳುವಳಿಯು ಸಹಾಯವಾಯಿತು. ಅದರಂತೆ ಕನ್ನಡಿಗರು ಸ್ವಾತಂತ್ರ್ಯ ಸಾಧನೆಗೆ ತಮ್ಮದೇ ಆದ ಕಾಣಿಕೆಯನ್ನು ವಿಶಿಷ್ಟರೀತಿಯಲ್ಲಿ ಸಲ್ಲಿಸಿದ್ದಾರಲ್ಲದೆ, ಕರ್ನಾಟಕದ ಏಕೀಕರಣದ ಗುರಿಯನ್ನು ಅವರು ಸಾಧಿಸಿಕೊಂಡಿದ್ದಾರೆ. ಅವೆರಡಕ್ಕೂ ರಾಷ್ಟ್ರೀಯತೆಯೇ ಏಕಮೇವ ಪ್ರೇರಕಶಕ್ತಿ.

# ಗ್ರಂಥಋಣ

೧) ಎಸ್. ಪಿ. ಪಾಟೀಲ (ಸಂ.) -ಜೀವನ ಶಿಕ್ಷಣ
೨) ಆಲೂರ ವೆಂಕಟರಾವ್ -ಕರ್ನಾಟಕತ್ವ ವಿಕಾಸ
೩) ಆಲೂರ ವೆಂಕಟರಾವ -ನನ್ನ ಜೀವನ ಸ್ಮೃತಿಗಳು
೪) ಬಸಪ್ಪ ಶಿಂತ್ರಿ-ಲಿಂಗೈಕ್ಯ ಡೆಪ್ಯುಟಿ ಚನ್ನಬಸಪ್ಪನವರು -ಜೀವನ ಶಿಕ್ಷಣದಲ್ಲಿ
೫) ಬಿ. ಕೆ. ಹೊಸಮಠ -ಹೊನ್ನಾಪೂರಮಠ ದರ್ಶನ
೬) ವಿಮಲಾ ಎನ್. ಪಾಟೀಲ -ಹೊನ್ನಾಪೂರಮಠ ಗದಿಗೆಯ್ಯನವರು ಸಾರಥಿ ವಾರಪತ್ರಿಕೆ, ಗುಲ್ಬರ್ಗ ೨೮-೯-೧೯೬೯
೭) ಎ. ಎಸ್. ನಂಜುಂಡಸ್ವಾಮಿ-ಭಾರತೀಯ ರಾಷ್ಟ್ರೀಯತೆಯ ವಿಕಾಸ
೮) ಡಿ. ವ್ಹಿ. ಶೇಷಗಿರಿರಾವ್ -ರಾಜಾ ರಾಮಮೋಹನ ರಾಯ್
೯) ಪಿ. ಜಿ. ಸತ್ಯಗಿರಿನಾಥನ್-ಇಂಗ್ಲಂಡಿನ ರಾಜಕೀಯ ಬೆಳವಣಿಗೆ
೧೦) ಬಿ. ಶಿವಮೂರ್ತಿ ಶಾಸ್ತ್ರಿ -ಕರ್ನಾಟಕ ಸಂದರ್ಶನ
೧) ನಾಡಿಗ ಕೃಷ್ಣಮೂರ್ತಿ-ಭಾರತೀಯ ಪತ್ರಿಕೋದ್ಯಮ

೧೨) ಜಿ. ಎಸ್. ಹಾಲಪ್ಪ (ಸಂ) -ರಾಷ್ಟ್ರ ಧರ್ಮದೃಷ್ಟಾರ ಹರ್ಡೇಕರ ಮಂಜಪ್ಪ

೧೩) ಡಿ. ವಿ. ಜಿ. -ವಸಂತ ಕುಸುಮಾಂಜಲಿ

೧೪) ಜಿ. ಎಸ್. ಹಾಲಪ್ಪ-ಎಚ್ಚೆತ್ತ ಭಾರತ ಎತ್ತ ಸಾಗಿದೆ

೧೫) ಆರ್.ಆರ್. ದಿವಾಕರ -ಕರ್ನಾಟಕ ಏಕೀಕರಣದ ಕಥೆ

೧೬) ಆರ್. ಆರ್. ದಿವಾಕರ ಕಾಂಗ್ರೆಸ್ - ರನ್ನಮಹೋತ್ಸವ

೧೭) ಆರ್. ಆರ್. ದಿವಾಕರ -ಏಕತಂತ್ರ ಕರ್ನಾಟಕ

೧೮) ಆರ್. ಜಿ. ಜಹಗೀರದಾರ ಮತ್ತು ಲಿಂಗಸೂರ ವಿಠಲ್ ರಾವ್ (ಸಂ.) -ಹೈದರಾಬಾದ ಕರ್ನಾಟಕ

1) **Walter Suizback**-National consciousness.

2) **Tarachand**-History of the Freedom movement in India Vol. I

3) **A. V. Mazumdar**-Indian national Evolution

4) **I.M.Mutthanna** -History of Karnatak (History, administration & Culture)

5) **A. P. Karmarkar**-Cultural History of Karnatak(Ancient and Medieval)

6) **P. B. Desai, Shrinivas Ritti & B. R. Gopal -A** History of Karnatak (From pre-History to unification)

7) **M. V. Krishna Ra**o-The growth of Indian Liberalismin 19th Century.

8) **R. S. Hukkerikar**-(ed) Karnatak Darshana

9) **G. S. Halappa**-History of Freedom Movement in Karnatak vol. II

10) **B. A. Saletore**-Ancient Indian Political thought and institution

# ಉಪನ್ಯಾಸ ಗ್ರಂಥಮಾಲೆಯ ಇತ್ತೀಚಿನ ಪ್ರಕಟನೆಗಳು

ಬೆಲೆ : ಪ್ರತಿ ಒಂದಕ್ಕೆ ೨೫ ಪೈಸೆ

೧. ನವಭಾರತ ನಿರ್ಮಾಪಕ
ರಾಜಾ ರಾಮಮೋಹನರಾಯ್ —ಜಿ. ಜಿ. ಕಾಡದೇವರ

೨. ಭಾರತೀಯ ಸಂವಿಧಾನದಲ್ಲಿ
ಮೂಲಭೂತ ಹಕ್ಕುಗಳು —ಶಿವಾನಂದ ಗುಬ್ಬಣ್ಣವರ

೩. ಭಾರತದ ಆರ್ಥಿಕ ಬೆಳವಣಿಗೆಯ
ಗುಣದೋಷಗಳು —ಡಿ. ಎ. ಹೆಗಡೆ

೪. ಸಸ್ಯಪೋಷಕಗಳು —ಸಾ. ನಾ. ವಜ್ರನಾಭಯ್ಯ

೫. ಕೌಟಿಲ್ಯನ ಅರ್ಥಶಾಸ್ತ್ರ — ಅರವಿಂದ ಜೋಶಿ

೬. ಮೊಹರ್‍ರಂ ಪದಗಳು —ಚೆನ್ನಣ್ಣ ವಾಲೀಕಾರ

೭. ಬಳ್ಳಾರಿ ಜಿಲ್ಲೆಯ ಶಿವಶರಣರು —ಶಾಂತರಸ

೮. ಸಕ್ಕರಿ ರೋಗ —ಪಿ. ಎಸ್. ಶಂಕರ್

೯. ಕಳೆ ನಿಯಂತ್ರಣ —ಎಂ. ಎಂ. ಹೊಸಮನಿ

೧೦. ನಮ್ಮ ದೇಶದಲ್ಲಿ ಬಡತನ
ಹಾಗೂ ಅದರ ನಿವಾರಣೆ —ಎಂ. ಸಿ. ಕೊಡ್ಲಿ

---

ಪ್ರಸಾರಾಂಗ—ಪ್ರಕಟನ ವಿಭಾಗ
ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ-೫೮೦೦೦೩